# brown book

## THE BOOK WAS DRENCHED

# ಓಂ ಅಶಾಂತಿಃ

ರಸಿಕರಂಗ

ಕಾವ್ಯಪ್ರಕಾಶನಸಮಿತಿ—೪
೧೯೫೧

ಸಾದಾಪ್ರತಿ ರೂ. ೧-೦-೦
ಉತ್ತಮಪ್ರತಿ ರೂ. ೧-೮-೦

ಪ್ರಕಾಶಕರು :
ಪ್ರೊ. ರಂ. ಶ್ರೀ. ಮುಗಳಿ
ವಿಲಿಂಗಡನ್ ಕಾಲೇಜ
ವಿಶ್ರಾಮಬಾಗ,
ಸಾಂಗಲಿ.

[ ಮೊದಲನೆಯ ಆವೃತ್ತಿ ]

ಮುದ್ರಕರು :
ಶ್ರೀ. ಎಸ್. ಎನ್. ದೇಶಪಾಂಡೆ,
ಎಂ. ಎ., ಬಿ. ಎಸ್ಸಿ
ಮ್ಯಾನೇಜರ,
ಶ್ರೀಗಣಪತಿ ಸಂಸ್ಥಾನ ಪ್ರೆಸ್
ಸಾಂಗಲಿ.




ಸವಿಬಗೆಯೆ ಸವಿಬಾಳಿ
ಸವಿನುಡಿಯ ಸೊಗಸಾಗೆ
ಕನ್ನಡಸರಸತಿಯ ಸಹಜಶ್ರೀನಿವಾಸ-
ಮಾಸ್ತಿಯವರಿಗೆ

—ರಸಿಕರಂಗ

# ಮುನ್ನುಡಿ

ಇದು ನನ್ನ ಮೂರನೆಯ ಕವನಸಂಗ್ರಹ. ‘ ಅಪಾರ ಕರುಣೆ ’ ಯಲ್ಲಿ ಪ್ರಕೃತಿ ಹಾಗೂ ಪ್ರಪಂಚ ಎಂಬೆರಡು ವಿಭಾಗಗಳಲ್ಲಿ ಕವನಗಳನ್ನು ಪವಣಿಸಲಾಯಿತು. ಇದರಲ್ಲಿ ಕವಿವ್ಯಕ್ತಿ ಪ್ರಧಾನನಾಗಿದ್ದಾನೆ ಕವಿಯ ಸ್ವಾನುಭವಪ್ರಪಂಚ ಇಲ್ಲಿ ವಿಷಯವಾಗಿದೆ. ಕವನಗಳನ್ನು ಕಾಲಕ್ರಮದಿಂದ ಜೋಡಿಸಿದೆ. ಕವನಗಳ ವಿಮರ್ಶೆಗೆ ನೆರವಾಗುವ ದೃಷ್ಟಿಯಿಂದ ಒಂದು ವಿಸ್ತಾರವಾದ ಮುನ್ನುಡಿಯನ್ನು ಬರೆಯಬಹುದಾಗಿತ್ತು, ಟಿಪ್ಪಣಿಗಳನ್ನು ಕೊಡಬಹುದಾಗಿತ್ತು. ಯಾವುದೂ ಇಂದಿನ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲವಾಗಿದೆ. ಒಂದು ಮಾತನ್ನು ಸೂಚಿಸಬಹುದು. ಈ ಸಂಗ್ರಹದಲ್ಲಿ ನನ್ನ ವೈಯಕ್ತಿಕ ಅನುಭವ, ಅದರ ಏರು–ಇಳಿತ, ವಿವಿಧಲಹರಿ, ವಿಚಾರಪ್ರಣಾಲಿ ಇವುಗಳನ್ನು ಅರಿತುಕೊಳ್ಳಲು ಸಾಕಷ್ಟು ಸಾಮಗ್ರಿಯಿದೆ. ಈ ಅರ್ಥದಲ್ಲಿ ನನ್ನ ಕಾವ್ಯಕ್ಕೆ ಈ ಸಂಗ್ರಹವೇ ಒಂದು ಕವನರೂಪವಾದ ಮುನ್ನುಡಿಯಂತೆ ನೆರವಾಗಬಹುದು. ‘ ಕಾವ್ಯಪ್ರಕಾಶನ ಸಮಿತಿ ’ ಯ ಪ್ರಕಟನೆಗಳಲ್ಲಿ ಇದು ನಾಲ್ಕನೆಯ ಸಾಹಸ. ನಾಲ್ಕೂ ಪುಸ್ತಕಗಳಿಗೆ ಕೂಡಿ ಎರಡುಸಾವಿರವರೆಗೆ ವೆಚ್ಚ ಬಂದಿದೆ. ಸಮಿತಿಯ ಪರವಾಗಿ ಇನ್ನೂ ಕೆಲವು ಸಂಗ್ರಹಗಳನ್ನು ಅಚ್ಚುಗೊಳಿಸುವ ಉದ್ದೇಶವಿದೆ. ಇದನ್ನು ನೆನೆದು ಕನ್ನಡಿಗರು ಈ ವರೆಗಿನ ಪುಸ್ತಕಗಳನ್ನು ಕೊಂಡು ಮುಂದಿನ ಪ್ರಕಟನೆಗಳು ಸಾಧ್ಯವಾಗುವಂತೆ ಮಾಡುವರೆಂದು ನಂಬಿದ್ದೇನೆ. ಇದರ ಮುದ್ರಣದ ಅಂದಕ್ಕಾಗಿ ಶ್ರೀಗಣಪತಿ ಸಂಸ್ಥಾನ ಪ್ರೆಸ್ಸಿನ ವ್ಯವಸ್ಥಾಪಕರಿಗೆ ಋಣಿಯಾಗಿದ್ದೇನೆ.

ವಿಶ್ರಾಮಬಾಗ
೨೦–೬–೧೯೫೫ } ರಂ. ಶ್ರೀ. ಮುಗಳಿ

# ಪರಿವಿಡಿ

# ನಾನು

ನಾನು ನಾನು ಎಂದರೇನು ?
ಸ್ವಲ್ಪದರಲಿ ಹೇಳಲೇನು ?
ನಾನು ತಿಳಿವ ಹಾಗೆ ನಾನು
ನಾನು ನನ್ನ ಕಾಮಧೇನು.

ನಾನು ಎನಲು ಎಲ್ಲರಿಂದ
ಬೇರೆಯಾದ ಮೈಯ ಅಂದ
ಬೇರೆ ಹೆಸರಿನಂದ ಚೆಂದ
ಇಷ್ಟೆ ತಿಳಿವುದೆ ಬಿಸವಂದ ?

ನಾನು ಎಂಬ ಇಂಥ ಹೊಳೆಯ
ನಾನು ಈಸಿ ಬಲ್ಲೆ ಗೆಳೆಯ
ನಾನು ಎಂಬ ಕಡಲಿನಲ್ಲಿ
ಮುಳುಗಲಿಲ್ಲ. ಧುಮುಕುತಲ್ಲಿ

ರತುನದೊಡನೆ ಏಳುತಿಹರು
ಮುಳುಗಿದವರು ಹೇಳುತಿಹರು
ನಾನು ವಿಶ್ವ ಒಂದೆ ಎಂದು
ಇಂತಿದೆನಗೆ ತಿಳಿವು.

# ತರಳಜೀವನ

ನಿನ್ನ ಕರುಣಾವಲಂಬನ
ನನ್ನ ಈ ತರಳ ಜೀವನ
ಅರಿತರಿತು ಜಾರುತಿರುವೆನು
ಮರೆಮರೆತು ದೂರುತಿರುವೆನು
ನೀನಿತ್ತ ದೇಹಯಾತ್ರೆಯ
ತುಂಬಿದೀ ಪುಣ್ಯಪಾತ್ರೆಯ
ತಿರುತಿರುಗಿ ತೆರವು ಮಾಡುವೆ
ಮರಳಿ ನೀ ತುಂಬಿ ನೀಡುವೆ
ಮುಸುಳಿಸಿರೆ ನನ್ನ ಕಾಣಿಕೆ
ಹುಸಿಯಾಗೆ ಹಲವು ಹೂಣಿಕೆ
ಕಳವಳಿಸಿ ಕುಗ್ಗಿ ನಾನಿರೆ
ಹೊಸ ಹುರುಪುಬುಗ್ಗೆ ನೀ ಬರೆ
ಕುಣಿಕುಣಿದು ಮುಂದೆ ಸಾಗುವೆ
ಕಣಕಣವು ನಿನ್ನದೆನ್ನುವೆ.
ಮೋಹಮಮತೆಗಳ ಮಾಲೆಯು
ಇದುವೆಲ್ಲ ನಿನ್ನ ಲೀಲೆಯು.



# ಕೊರತೆ

ಬೆಳೆಯುತಿರುವ ಬಾಳಿನೆಳೆಯ ಬಾಳೆಯೆಲೆಯ ಸುಳಿಯನು
ಕೊರತೆಯೆಂಬ ಕೊಯ್ತುದಲಗು ಕೊರೆಯುತಿಹುದನರಿವೆನು.
ಬೇರಿನಿಂದ ಚಿಮ್ಮಿಬರುವ ಜೀವರಸದ ಝರಿಯನು
ಮರೆವೆನೆಂತು ಮರಳಿ ಸುಳಿಯ ಬೆಳೆಸುವದರ ಪರಿಯನು. ೧

ಮೈಯು ಮನವು ಸೋತು ಸುರುಳಿಯಾಗಿ ಹುಳದ ಹಾಗಿರೆ
ಅಯ್ಯೊ ಎಂದು ಕೊರಗಿ ಕುಸಿವೆ ಬಾಳದೆಂತೊ ಸಾಗಿರೆ
ಮತ್ತೆ ಹರುಷ ಚಿತ್ತದಂತರಾಳದಿಂದ ನೂಗಿರೆ
ಸುರುಳಿ ತೊರೆದು ಹಿಗ್ಗುತಿರುವೆ ಬಾನವರೆಗೆ ತೂಗಿರೆ. ೨

ಮನೆಯ ಹಸುಳೆ ಬೆಳೆಯದಾಗೆ ನೆಲವ ಹೊಸೆದು ಸರಿಯಲು
ಬಾಳಿನೊಂದು ಸುಖದ ಸುಗ್ಗಿ ಹೋಯಿತೆಂದು ಜರಿಯಲು
ಜಗದ ಮನೆಯ ಮಗುಗಳಾಟ ಕಣ್ಣನೆಡೆಗೆ ಹರಿಯಲು
ತಣಿಯೆ ಕಂಡು ಜೀವ ಕುಣಿವುದೆಲ್ಲ ನೋವು ಮರೆಯಲು. ೩

ಒಲಿದ ಮಡದಿ ಗೋಳೆ ತೀವಿದಂಥ ಬಾಳ ಶಪಿಸುತ
ಇರಲು ಮೊರೆವೆ ಜನ್ಮವೆಂಥ ಶಾಪವೆಂದು ತಪಿಸುತ
ಒಲವು, ಆಸೆ, ಬಲವು ಮೈಯ ಮುತ್ತಿ ಸುತ್ತುವರಿಯುತ
ನಿಲಯು ನಲಿವೆ ತುಂಬುಹೊಳೆಯ ಹಾಗೆ ಸೂಸಿ ಹರಿಯುತ. ೪

# ಕಳೆದ ವರುಷವೆ

ಕಳೆದ ವರುಷವೆ ! ಮೊಳೆವ ವರುಷದ
ಮೊದಲ ದಿನದಲಿ ನಿಂದು ನಿನ್ನಯ
ಕೈಕುಲುಕಿ ಬೀಳ್ಕೊಳುವೆ ಕೈಕೊಳು ನನ್ನ ಈ ನಮನ.
ಹರಸು ಒಸಗೆಯ ಸರಸವೆನ್ನುತ ಮುಂದಿನೀ ಗಮನ. ೧

ಎಂದಿನಂದದಿ ನವಯುಗಾದಿಯು
ಇಂದು ಬಂದಿದೆ ಮುಂದುನೋಟಕೆ
ಬಾಳ ಕರೆಯುವ ಗಾಳಿ ನಿಲ್ಲದೆ ಬೀಗಿ ಬೀಸುತಿದೆ
ಬೆಳಕು ಹೊಸಹೊಸದಾಗಿ ಹೊಳೆಯುತ ಕಿರಣ ಸೂಸುತಿದೆ. ೨

ಮೂಕ ಪ್ರಕೃತಿಯ ಹಾವಭಾವದ
ಹಾಗೆ ಕಾಣುವ ಚಲನವಲನವು
ತಿಳಿವ ಕಣ್ಣಿಗೆ ನಿತ್ಯಲೀಲಾಲೋಲ ರಸಿಕನದು
ಕುಣಿತಮಣಿತವೆ ಆಗಿ ತೋರಿದೆ ಮರೆಯ ತೆರೆತೆರೆದು. ೩

ಅಲ್ಲಿ ಬೇವಿನ ಮರದಿ ತುರುಗಿದೆ
ಅಚ್ಚ ಹಸುರೆಲೆ ಹೊಚ್ಚಹೊಸ ಹೂ
ಕಹಿಯು ಸಿಹಿಯುನು ಸೊಬಗುಸೂರೆಯ ಹೊರಗೆ ಹೊಮ್ಮಿಸುತ
ಸೃಷ್ಟಿದೇವನ ನಿಚ್ಚಜವ್ವನ ಪರಿಯ ಸೊಮ್ಮಿಸುತ. ೪

ಕೆಂದುಟಿಯ ಕೆಂದಳಿರ ಮಾವಕೊ
ಹೂತು ಕಂಪಿನ ಮದವ ಬೀರಿದೆ,
ಮುಟ್ಟಿ ಮಾಸುವ ಚೆಲುವ ಸಿರಿಸಲ ಮತ್ತೆ ಮೂಡಿಹುದು
ಅಚ್ಚಕೆಂಪಿನ ಹಣ್ಣತೊಡಿಗೆಯ ಆಲ ಸೂಡಿಹುದು. ೫

ಇಲ್ಲಿ ಬಾಣತಿಬಣ್ಣ ಬಸರಿಯು
ಮರವು ತನ್ನೆಲೆ ಮಣ್ಣುಗೂಡಿರೆ
ವಿಗಡವಾಗಿಯೆ ಬರಿಯ ರೆಂಬೆಯು ಮೈಯ ಚಾಚಿಹುದು
ಜೊಳ್ಳ ಬಾಳಿದು ಏತಕೆಂಬೊಲು ಕೊರಗಿ ಯೋಚಿಹುದು. ೬

ಪರುಷ ವರುಷವೆ! ಹಂಬಲೊದವಿಸಿ
ಎಂಥ ಎದೆರ್ಮುಳ್ಳುಗಳ ಸಲ್ಲಿಸಿ
ಸೋಲಮಾಲೆಯ ತೊಡಿಸಿ ಜೀವವ ಗಾಸಿಗೈದಿರುವೆ!
ಆಸೆಬುರುಜನು ಕೆಡವಿ ಕಡುನಗೆನಗುತ ನಿಂದಿರುವೆ! ೭

ಜೋಕೆ ಎಂಬುದೆ ನಿಚ್ಟದುಸಿರನು
ಮಾಡಿ ಬದುಕಿರೆ, ತಿಳಿಯದಂತಿರೆ ಜೋಲಿಹೊಡೆಯಿಸಿ
ಮರೆಯ ಬರಸಿಡಿಲಾಗಿ ದುಗುಡವು ಎರಗಿ ಬಂದಿಹುದು
ಸುಖದ ಸ್ವಪ್ನವ ಸುಟ್ಟುಕರಿಕನು ಮಾಡಿ ಸಂದಿಹುದು! ೮

ಹೃದಯವಿದರಲಿ ಮೇರುವಂದದಿ
ಧೀರವಾಗಿಸಿ ಬಾಳುವಂದದಿ
ಹೊಸತು ಬಲವನು ತಿಳಿವ ನೀಡುತ, ಮುಂದೆಸಾಗುವಗೆ
ಪರುಷವಾಗುತ ಹರುಷವಾಗಲಿ ನಿನ್ನ ಹೋಗೆನಗೆ. ೯



# ಮಾನಸಮರಾಳ

ಮಾನಸಮರಾಳ!   ಮರಳಿ ನೆಗೆದೇಳ
ಕಲುಷಿತ ಕರಾಳ ಕೊಳದಿಂದ ಮೇಲೆ
ಕದಡಿ ಕೊಳೆಯಾದ ಪಕ್ಕಗಳ ಬಿದಿರಿ
ನಿರ್ಮಲನಿರಾಳಸರದಲ್ಲಿ ತೇಲೆ. ೧

ತಿಳಿಬಿಳಿದುಪ್ಪುಳ ನಿನ್ನ ನಯನವುರು
ಮಲಿತ ಜಲವುಂಡು ಮಾಸಿ ಹೋಗಿಹುದು
ಮುಗಿಲನೆ ಮುದ್ದಿಪ ನಿನ್ನಯ ನೋಟವು
ಮೀನದ ಕಣ್ಗಳ ಬಂದಿಯಾಗಿಹುದು. ೨

ಎತ್ತರದ ಗಿರಿಯ ಸರೋವರದಲ್ಲಿ
ಚೆಲುಗೊರಳ ತೂಗಿ ಒಯ್ಯಾರದಿಂದ
ಮೆಲ್ಲಡಿಯನಿಡುವ ಚೆಲ್ಲವನು ತೊರೆದು
ಜೊಂಡಿನಲಿ ಸಿಲುಕಿ ನೀನಿಹುದೆ ಚೆಂದ? ೩

ಕಾಣದೊಲು ನೀರಿನೊಳು ಬೇರಿಳಿಸಿದ
ಅಂತರಗಂಗೆಯು ಮಾಮಾಯೆಯಾಗಿ
ಹಸುರೆಲೆಯ ಹಾಸಿ ಹಸೆಗೆ ಕರೆದೊಡನೆ
ಒಸೆದು ಬೆರೆತಿರುವೆ ಕೆಳಕೆಳಗೆ ಬಾಗಿ. ೪

ಕೊರಗದಿರು ನೀನು ಕೊರಳೆತ್ತಿ ನೋಡು
ಮರುಗಿ ಮುಂದರಿಯೆ ಕಾಲವನುಕೂಲ
ಆಗಸದ ಹಿರಿಯ ಹಕ್ಕಿಯುಲಿ ಕೇಳು
ಹಾರು ಹಾಕುತ ರೆಕ್ಕೆಗಳ ತಾಲ. ೫

ಹಾರಿ ಹುರಿಗೊಂಡು ಮೇಲೇರಿ ಏರಿ
ಅಪಾರ ನೀಲದಿ ಮೈಯ ನೀ ತೂರು
ಮೋಡಗಳ ಬೆಳ್ಳಬೆಳಗಿನಲಿ ಮಿಂದು
ಸತ್ವಶಿರೋಮಣಿಯಾಗಿ ಮುನ್ಸಾರು. ೬

ಧವಳಗಿರಿಶಿರದಿ ಮಾನಸದ ಸರದಿ
ಇಳಿದು ತಿಳಿನೀರಿನೊಳು ಈಜಾಡು
ನಿನ್ನ ಪಡಿನೆಳಲ ನೋಡುತ ನಲಿಯುತ
ಅಮರಸುಖಶಾಂತಿಕಾಂತಿಯ ಕೂಡು. ೭



# ಹರಕೆಯ ಕೈ

ನಿನ್ನ ಹರಕೆಯ ಕೈಯ ಹೊಂದಿ ತಣಿದೆನು ತಾಯೆ
ಬನ್ನವೇನೇ ಬರಲಿ, ಇರಲಿ ನಿನ್ನಭಯಛಾಯೆ ! ॥ ಪ ॥

ನಾಡನೆಲೆಯನು ತೊರೆದು ದೂರದೂರಕೆ ನಡೆದು
ಕಾಡುಕತ್ತಲೆಯಲ್ಲಿ ನಾ ಸಾಗಿರೆ
ನೇಸರನ ಮರೆಮಾಡಿ ನೆರೆದ ಮರಬಳ್ಳಿಗಳು
ಹಾಸಿರುವ ನೆರಳಲ್ಲಿಯೇ ಬಾಗಿರೆ. ೧

ಏನೊ ಏಕೋ ಕುಳಿತೆನಲ್ಲಿರುವ ಕಲ್ಲಿನಲಿ
ಮುನ್ನರಿವು ಇಲ್ಲದಲೆ ಮರುಳನಂತೆ
ಕುಳಿಕುಳಿತು ತುಳಿತುಳಿದು ಕಲ್ಲಹಾಸುಗೆಯನ್ನು
ಕೆಳಗಾಲಿನಿಂದೊದೆದೆ ಗರುವನಂತೆ. ೨

ಮರುಚಣದಿ ಕಣ್ಣಿಳಿಸಿ ಕೆಳಕಂಡೆ ಬೆರಗಿನಲಿ
ಹಿರಿಯ ಚೆಲುವಿನ ದಿವ್ಯಮೂರ್ತಿಯೊಂದು
ಬೇವಸದಿ ಮೈಯೆಲ್ಲ ಉರಿಯೆದ್ದು ಮೇಲೆದ್ದೆ
ಸಾವಸಂಕಟದಲ್ಲಿ ನೊಂದುಬೆಂದು. ೩

ತುಳಿದ ಕಲ್ಲನು ತೊರೆದು ಮರುಕದುರಿಯಲಿ ನಿಂದು
ಹೊಳೆವ ಚಿನ್ನದ ಬೊಂಬೆಯಾಗಿ ನಿಲಲು
ಕುರುಡು ಕಂಗಳತನವು ಕಳೆದು ತಿಳಿವಿನ ತೊರೆಯು
ಗರುವಬಿಂಕವ ಮೀರಿ ಹರಿಯುತಿರಲು. ೪

ನೆಲದಿಂದಲೊಯ್ಯೊಯ್ಯನೇರಿ ನೀ ಬೆಳೆಬೆಳೆದು
ಕೆಲದಲ್ಲಿ ನಿಂದೆಯಲ ಲೋಕಮಾತೆ !

ನಿನ್ನ ನೋಟದಿ ನಾನು ಬಿಲ್ಲುಬೆರಗಾಗಿರಲು
ನನ್ನ ತಲೆಯಲಿ ನಿನ್ನಕೈಯನಿತ್ತೆ. ೫

ಅಭಯಹಸ್ತವ ಕಂಡು ಕೃಪೆಯ ಕಡಲೆನ್ನೆಡೆಗ
ಶುಭದ ತೆರೆಗೈಯ ಚಾಚಿತು ಎಂದೆ
ಕನಸಿನಲಿ ಕಂಡರೂ ಬಾಳ ಬೆಳಗಿಸುವ ಕಿರ-
ನನಸೆಂದು ನಾ ಹಿಗ್ಗಿನಲಿಯೆ ಮಿಂದೆ. ೬

ದುಃಖದುಮ್ಮಾನಗಳ ಸಿಡಿಲಿನೇಟಿಗೆ ಸಿಲುಕಿ
ತಕ್ಕ ತಿಳಿವನು ಪಡೆದು ಅರಿತೆನೀಗ
ಆರಡಿಯು ನಾನಿಡಲು ಸರಿದಾರಿಯಲಿ ನೀನು
ನೂರುಗಾವುದ ಹರಿದು ಒಲಿವೆಬೇಗ. ೭

ಮನುಜಮತಿಯರಿಯಲಾರದ ದಯೆಯ ಅಪರಿಮಿತ
ಕಣಜವೇ! ಧನ್ಯನಾನಿಂದು ಧನ್ಯ!
ನಿನ್ನ ಕಂಡಿಹ ಕನಸು ನಿಚ್ಚನಂದಾದೀಪ-
ದನ್ನವಾಗಲಿ ಬೆಳೆಯೆ ನನ್ನ ಪುಣ್ಯ!



# ದೀಪಸ್ತಂಭ

ಸುತ್ತೆಲ್ಲ ನೀರೆ ನೀರಾದ ಕಡಲಿನ ಹರವು
ಎತ್ತಲೂ ಏರೇರಿ ಬರುವ ತೆರೆ ಸಾವಿರವು
ಇದು ಏನು ಯಾಕೆಂದು ತಿಳಿವ ಬಗೆನಾವೆಗಳು
ಮದದಿ ಸುಳಿದಾಗಿಹವು ಬರಿ ಮೂಡುಮುಳುಗುಗಳು.
ಎಂದಿಗೂ ಇದ್ದಂತೆ ಇಹುದು ಈ ಮುನ್ನೀರು
ಇಂದಿಗೂ ಇದರಾಳವರಿತವರು ಅದು ಯಾರು ?
ಅರಿಯಹೋದರೆ ಹೆಮ್ಮೆ ತಳಕಾಣುವುದು ಒಮ್ಮೆ
ಇರುವುದಿದ್ದಂತಿರವು ಅಜ್ಞೇಯವಿದು ನೂರ್ಮೆ
ತತ್ವವೇನೇ ಇರಲಿ, ಸತ್ವವೇ ಹಿರಿಯಿರವು
ಸತ್ವದಲಿ ತನ್ನ ಕೋಟೆಯ ಕಟ್ಟೆ ಅದೆ ಅರಿವು
ಮುನ್ನೀರ ತೆರೆಹೊಯ್ಲು ಮುತ್ತಿ ಮುಸುಕಿದರೇನು ?
ಕಣ್ಣೀರ ಹೊಳೆಬಂದು ಕೂಡಿ ಕಲಕಿದರೇನು ?
ಅಲುಗದರೆಬಂಡೆಯೊಂದರ ಮೇಲೆ ಕಾಲೂರಿ
ಅಲೆಯದರಿವಿನ ದೀಪಸ್ತಂಭವಾಗಿಹುದೆ ಸಿರಿ.



# ಸೋದರತ್ತೆಗೆ

‘ ಈ ಮನೆಯ ಬಳ್ಳಿ ನನೆಕೊನೆಹೋಗಿ ಮುದ್ದುಮಗು-
ಗಳ ಮಧುರನಗೆಯ ಹೂಬಿಡಲಿ ನರುಗಂಪಿಡಲಿ
ತಲೆತಲೆಯ ಹಳನಡತೆ ಬೇರೂರಿ ಪಸರಿಸಲಿ ’
ಎಂಬ ಕನಸನು ಹೊತ್ತು ನನಸುಗೊಳಿಸಲಿಕೆಂದು
ಕಲ್ಪವಲ್ಲರಿಯಂತೆ ತುಂಬಿದುಕ್ಕಂದದಲಿ
ನೀನೆಮ್ಮ ಸಂಸಾರದಲಿ ಬೆರೆತು ಬಂದೆಯೌ.
ಕೈಹಿಡಿದ ನಲ್ಲೆಯನು ಹಡೆದ ತಾಯಾಗಿ ನೀ
ಬೆಳೆವೆನ್ನ ಮನೆತನಕೆ ಹಿರಿಸಾಕುತಾಯಾದೆ.
ಹತ್ತೆಂಟುವರ್ಷಗಳ ಹಿಂಬಾಳ ನೆನಸಿದರೆ
ಕಂಬನಿಯು ಮುಂಜುತೆರೆಮರೆಗೊಂಡು ಬೇಯುವುದು
ಕುದಿಕುದಿವ ಈ ಎದೆಯು, ಕಂಡುದೊಂದುಂಡುವದು
ಬೇರೊಂದು ತೋರುತಿರೆ, ದುರ್ವಿಧಿಯು ಕಟ್ಟಣಕ-
ದಿದಿರೆಳ್ಳನಿತುಸಹಿತ ಸಾಗದಿರೆ ನಿನ್ನಾಟ.
‘ ಕಾಯವ್ವ ಕುಲದೇವಿ ಎಲ್ಲವ್ವ ಈ ಮನೆಯ-
ನೆಂದು ನೀ ದಿನದಿನವು ಬೇಡಿ, ಬಾಯ್ಬಿಡುತಿರಲು,
ಬೇನೆ ಕುಲದೇವತೆಯು, ಕಣ್ಣೀರೆ ನಿಟ್ಟುಸಿರೆ
ಕದಲದಾರತಿಯಾಗಿ ಸಾವ ಕೌನೆರಳಲ್ಲಿ
ಕಾಲವನು ನೂಕಿದೆವು ಹೆದರಿಕೆಯ ಜಪತಪದಿ.
ಮನೆಮಡದಿ ನಲಿದೊಲಿದು ಬಾಳಬನವನು ಸೇರಿ
ತಿರುತಿರುಗಿ ಹೆರಿಗೆಹಾವಿನ ಕಚ್ಚುನಂಜೇರಿ
ಪಾಡಳಿದು ತಾಯ್ಸೊಗಕೆ ಎರವಾಗಿ ಸೋತಿಹಳು.
ಮನೆಬಳ್ಳಿ ಬೆಳೆವುದೆಲ್ಲಿಯುಮಾತು, ಬನ್ನಬಿರು-
ಬಿಸಿಲಿಂದ ಮುರುಟೆ ನೀರಸವಾಗಿ ಬದುಕಿಹುದು
ಮೊದಲಮಗುಮುಗುಳು, ತಾನರಳದಲೆ ಕೈಕಾಲು

ಜೋಲಾಗಿ ಪೂರ್ವಕರ್ಮದ ಪಿಂಡ ಕರಗದಿದೆ.
ಹಲಹಸುಳೆ ನನೆಯಲ್ಲಿ ಕೊನೆಗಂಡು ಕಣ್ಣೀರ
ಹರಿಸಿದವು, ಹುಟ್ಟಿ ಬೆಳೆವೊಂದು ಚಿಲುಗಂಡುಹೂ
ಅರಿದಾಗಿ ಕೈಬಿಟ್ಟು ಹೋಯ್ತು ಕಣ್ಮರೆಯಾಗಿ.
ಈ ಎಲ್ಲ ಕಹಿಯುಂಡು ಸೇವೆಯಲಿ ಜೀವವನು
ತೇದು ನೀ ಮರುಕದುರಿಯಲಿ ಬೆಂದು ಬಸವಳಿದೆ.
ಹಳೆಯ ಸಾರಾಸಾರವೆಲ್ಲದರ ಸಂಕೇತವೇ
ನೀನಾಗಿ ವ್ರತನಿಯಮಗಳ ಕಠಿಣಕಟ್ಟಳೆಗೆ
ಮೈಮಣಿಸಿ ಸಂಕಲ್ಪಸಾಧನದಿ ಮುಂದಾದೆ;
ನಮ್ಮ ಕರ್ಮದ ಮುಂದೆ, ಇದಿರು ಬೆಟ್ಟವಕೊರೆದು
ಮುನ್ನುಗ್ಗಲೆಳಸುತಿಹ ಕಾಳ್ಪುರದ ತೆರನಾಗಿ
ನಿನ್ನಯ ಹಟಾಟೋಪ ಹರಿಗಡಿದು ಹೋಯಿತಾ,
ಆಶೆ ಅಸ್ತಮಿಸಿದೊಲು, ಸೇವೆಸಪೆದಳಿದಂತೆ,
ನಿನ್ನಯಾ ಕನಸುಮನೆ ಕೆಳಗುರುಳುವುದ ಕಂಡು
ಹೊರಳಿ ನೋಡದೆ ನೀನು ಕಂಬನಿಯನುರುಳಿಸುತ
ಸಾವಿನುರಿಗುಂಡದಲಿ ಬಯಸಿದೊಲು ಸೇರಿಹೋದೆ.
ಸೋದರತ್ತೆಯೆ, ನಿನಗೆ ಸಾದರತಿಲಾಂಜಲಿಯು !
ಮರೆಯೆವೆಂದಿಗು ನಮಗೆ ನಿನ್ನ ಸೇವೆಯ ಬಲಿಯು !
ನಿನ್ನ ಕನಸದು ಈಗ ಮರಳುಮನೆಯಾದರೂ
ಮಂಗಳವು ತಿಂಗಳನ ತೆರದಿಂದ ಮೆರೆಯಿತು,
ಒಲವು ಫಲಿಸದೆ ಇರದು, ಭಕ್ತನಿಗೆ ಅಳಿವಿಲ್ಲ,
ದುಷ್ಕರ್ಮ ಹಣ್ಣಿದೊಲು ಸತ್ಕರ್ಮ ಸುಸ್ವಪ್ನ
ಹಣ್ಣಿಯೇ ತೀರುವವು, ತಾಳ್ಮೆಯಲಿ ಬಾಳುವೆಯು
ತಿರುಳಿಹುದು, ಜೀವನದಿ ನಂಬಿಕೆಯು ಬಲಪಡಿಸಿ
ತಿಳಿನೋಟದಲಿ ಹೊಳೆದು ಹೊಳೆಯಂತೆ ಹರಿಯುವೊಲು
ನಿನ್ನ ಒಲವಿನ ಹರಕೆ ನಮ್ಮ ತಲೆಮೇಲಿರಲಿ !

# ಕಾಯೆ ತಾಯೆ

ಕೆರಳಿ ಮೊರೆವ ಕಡಲಿನಲ್ಲಿ
ಬಿರುಕುಪಡೆದ ಕಿರಿಯ ನಾವೆ
ಬಿರಿಯುತಿಹುದು ಬಿರುಸಿನೆದೆಯ
ಕಾಯೆ ತಾಯೆ ಅಭಯದಾಯಿನಿ !

ಬಂದರಗಳ ಬಂಧಮೀರಿ
ಬಂದು ನೀರ ಹರಹಿನಲ್ಲಿ
ಮಿಂದು ತೇಲಿ ಸ್ವಚ್ಛಂದದಿ
ಮುಂದೆ ಹುಟ್ಟುಹಾಕುತಿರುವೆನು. ೧

ಕಂಗಾಣದ ಗಾಳಿಸೆಳೆಗೆ
ತುಂಗಗಿರಿಯ ತೆರೆದ ತೆರೆಯು
ನುಂಗುವಂತೆ ಏರಿಏರಿ
ಬಂದು ಸುತ್ತುವರಿದು ಮುತ್ತಿವೆ. ೨

ಒಲಿದು ಹತ್ತಿಕೊಂಡ ಜೀವ
ಒಲೆವ ನಾವೆಯಲ್ಲಿ ಸಾವು-
ಬಲೆಗೆ ಸಿಲುಕಿ ಹೇಗೊ ಮರಳಿ
ಬದುಕಿ ಬೆದರಿದೆರಳೆಯಾಗಿವೆ. ೩

ದೋಣಿಯೊಳದ ತುಂತುರು ಸಹ
ಮುಳುಗಿನ ಮಾಭಯವ ತೋರಿ
ಕಣ್ಣನೀರಧಾರೆ ಹರಿಸಿ
ಎಂಥ ಭಯವ ಶೋಕವೆಸಗಿವೆ ! ೪

ಗುರಿಯು ತೋರ್ವ ಧ್ರುವದ ತಾರೆ
ಪರೆಯು ಕವಿದ ಕಣ್ಗೆ ಮಸುಳೆ
ಮರೆಯಲಿದ್ದು ಪೊರೆವೆಯೆಂಬ
ಅರಿವು-ನೆಚ್ಚು ಕೈಯ ಬಿಡುತಿವೆ. ೫

ಭಯನಾಶಿನಿ ಶುಭಕಾರಿಣಿ !
ದಯೆಯ ಜೇನ ತುಂಬುಗೊಡವೆ !
ತಾಯಿತನದ ಹುಟ್ಟುಬೇರೆ !
ದುಕ್ಕದಲ್ಲಿ ಧೈರ್ಯವೂರಿಸೆ. ೬

ಬಿರಿದ ಬಿರುಕು ನನ್ನ ತುಳಿತ—
ಕೊರೆತದಿಂದಲಾದುದಾಗೆ
ಅರಿತುಬೇಗ ಸರಿಗೊಳಿಸಲು
ಸ್ಫುರಿಸುವಂತೆ ಮನವ ಪ್ರೇರಿಸೆ. ೭

ಕೊನೆಗಾಣದ ಕಡಲಿನಲ್ಲಿ
ಅನವರತದ ಯಾತ್ರೆಯಲ್ಲಿ
ಕ್ಷಣದ ಶೋಕ ಬರುವಶೋಕ-
ಪದಕೆ ಹರಕೆ ಎಂದು ಕಾಣಿಸೆ. ೮



# ಯತಿವರನೆ

ಯತಿವರನೆ ಶ್ರೀಗುರುವೆ
ಜನ್ಮಜನ್ಮದ ತಪವೆ
ಮೈಗೊಂಡು ನಿಂತಿರುವ ಕಲ್ಪತರುವೆ !

ಹಲವು ವರುಷದ ಹಿಂದೆ
ಕಲಿಕೆಯೆಲ್ಲವು ಸಂದೆ
ನಿನ್ನ ಸಂನಿಧಿಯಲ್ಲಿ ನಡೆದು ಬಂದೆ. ೧

ಕಾಳಕತ್ತಲೆಯಲ್ಲಿ
ಬಾಳದೀವಿಗೆಯಲ್ಲಿ
ಬೆಳಕನಿಡು ಗುರುವೆಂದೆ ನಿನ್ನಲ್ಲಿ. ೨

ಮರಳಿ ಬಂದಿಹೆನಿಂದು
ಮುರಿದ ಸಂಸಾರವನು
ನಿನ್ನ ಪಾದದಿ ಹಾಕಲಿಕೆ ತಂದು. ೩

ಕಂಡ ಬೆಳಕಿನ ಕಿರಣ
ಜಡಕೆ ಆಯಿತು ಶರಣ
ಹೌಹಾರಿ ಹೋಗಿಹುದು ನನ್ನ ಹರಣ. ೪

ಬೇಡುವುದ ಬಲ್ಲವನೆ
ಬೇಡಲೇನೈ ನೀನೆ
ಕ್ಷೇಮಪಥದಲಿ ನಡೆಸು ಜೀವನವನೆ. ೫

ಕೇಳಲಾರೆನು ದಯೆಯು
ಮಡದಿಮಗುವಿಗೆ ಮೈಯು
ನೆಮ್ಮದಿಯು ಸಂಸಾರಸಾರ ಸಿರಿಯು. ೬

ತಪ್ಪಡಿಯು ತೊಲಗುತಲಿ
ಸುಖಶಾಂತಿಯರಸುತಲಿ
ಹಿರಿಬಾಳ ಬೀದಿಯಲಿ ನಾ ನಡೆಯಲಿ. ೭

ಮೋಹಮಾಯೆಯ ಗೆಲಿದು
ಘೋರತಪವನು ಗೈದು
ಕಲ್ಲರಳಿ ದಯೆಯು ಹಿರಿ ಆಸರಾವೆ. ೮

ತನ್ನ ತಾನುದ್ಧರಿಪ
ತಪದ ದಾರಿಗೆ ಪೋಪ
ಶ್ರದ್ಧೆಯನು ಶಕ್ತಿಯನು ನಮಗೆ ನೀಡು. ೯

ನಿನ್ನ ಬಳಿಯಲಿ ಬಂದು
ದೈನ್ಯದಲಿ ಮೊರೆನಿಂದು
ಸೇವೆಯಲಿ ಬೇಡಿದುದಗಳಿಪೆವೆಂದು ೧೦

ಲೌಕಿಕದ ಕೊಡುಕೊಳೆಯು
ಬಳಸುತಲಿ ಬರುವ ಜನ
ಬಳಿಯಲಾರರು ತಮ್ಮ ಬಾಳಕೊಳೆಯ. ೧೧

ದೈನ್ಯದಂಭವ ಬಿಡಿಸು
ಸತ್ಯಧರ್ಮವ ಹಿಡಿಸು
ನಿನ್ನ ಧ್ರುವತಾರೆಯೇ ನಮ್ಮದೆನಿಸು. ೧೨

# ಇನ್ನಾದರೂ ಎಚ್ಚರು

ಇನ್ನಾದರೂ ಎಚ್ಚರು
ಓ ನನ್ನ ರಾಜಕುವರ ! ॥ ಪ ॥

ಕಾಲಮೀರಿಹುದೆಂಬ
ಸೋಲಿಗೀಯದಿರೆಂಬ
ನಿಮಿನಿಮಿಷವಾಗಿರಲು
ಅಮೃತರಸದಾ ಹೊನಲು. ೧

ಅರಿವನರುಹಿರೆ ಮೊಗವು
ಮರಣದಂತಹ ಮರವು
ಕರೆದಂತೆ ಮನಬೆರೆತು
ಒರಗಿರುವೆ ಮೈಮರೆತು. ೨

ಎಂಥ ಕುದುರೆಯನೇರಿ
ಪಂಥದಲಿ ಕಾಹೇರಿ
ಬೇಟೆಗೋಸುಗ ಬಂದೆ
ಬಿಲ್ಲುಬಾಣವ ತಂದೆ. ೩

ನೆಲದ ಸಿರಿ ಸೊಗಸೆಲ್ಲ
ನನ್ನದೆನ್ನುವ ಸೊಲ್ಲ
ನುಡಿವ ನೋಟವ ಬೀರಿ
ನಡೆದೆ ಮಿತಿಮೀರಿ. ೪

ಹಕ್ಕಿಹರಣವ ಕೊಂಡೆ
ಹಿಗ್ಗಿನೂಟವನುಂಡೆ
ಚಿಗರೆಕಣ್ಣಾಳ ಸೆರೆಗೆ
ನೆಗೆದೆ ನೀನೆದೆ ಕರಗೆ. ೫

ಬೇಟೆಯಾಡಲು ಬಯಸಿ
ಬಿಲ್ಗೆ ಬಾಣವನಿರಿಸಿ
ಮೃಗವ ಗುರಿಗೊಂಡಂತೆ
ಮೃಗಕಾದೆ ಗುರಿಯಂತೆ. ೬

ಬೇಟೆಗಾರನು ಹೋಗಿ
ಬೇಟಬಲೆಗೊಳಗಾಗಿ
ಸಿರಿಯ ಸೋಗಿನ ಹಿರಿದು
ಮರೆಮೋಸವನೆ ಮರೆದು— ೭

ಕಾಡಿನಲಿ ಘುಮುಕಿದೆ
ಮೋಡಿನಲಿ ದುಡುಕಿದೆ
ಬೇಕುಬೇಕೆಂದುಸುರಿ
ನೂಕುನುಗ್ಗೆಂದೊದರಿ. ೮

ಮನೆಮಾರುಗಳ ತೊರೆದು
ಜನಜಾತ್ರೆಯನು ಜರೆದು
ಸಾಸದಲಿ ಮನನೆಟ್ಟು
ಕಾಡುಪಾಲಾದೆ ಕೆಟ್ಟು. ೯

ಕತ್ತಲೆಯ ತವರಾಗಿ
ಎತ್ತಲೂ ತೊಡಕಾಗಿ
ಬೆಳೆದ ಕಾರಡವಿಯೊಳು
ಸುಳಿದೆ ನೀ ತಿಳಿಯದೊಲು. ೧೦

ಅಲೆದು ತಂದಿಹ ಸರುವ
ಮೊಲಜಿಂಕೆಗಿಳಿಗೊರವ-
ಬೇಟೆಯಲಿ ಮುಚ್ಚಿಹುದು
ಕುದುರೆವೈ ಹೆಚ್ಚಿಹುದು. ೧೧

ಮುಂದೇನು ಎನ್ನೊಡೆಯ
ಎಂದೆಂಬ ಕಣ್ಕಡೆಯ
ಕೆಳಬೀರಿ ಕಳವಳದಿ
ದೊರೆಯಲಾರದೆ ಹಾದಿ— ೧೨

ನಿಂದಿರಲು ಆ ಕುದುರೆ
ವೈನವಿರು ತಾನದುರೆ
ಕೆಡೆದಿತ್ತೊ ನೆಲದೆಡೆಗೆ
ಮಡಿದಿತ್ತೊ ಆಕಡೆಗೆ. ೧೩

ಮಡಿದ ಕುದುರೆಯ ಮೇಲೆ
ನಿನ್ನ ವೈಯದು ಜೋಲೆ
ಸಾಸ ಕೆಳಗುರುಳಿದೊಲು
ಗಾಸಿಯದು ಸುರುಳಿದೊಲು— ೧೪

ಜಿಯ್ಯುಗುಡುವ ಕಾಡಿನಲಿ
ಒಯ್ಯನುರುಳಿದೆ ಒರಲಿ
ತಣಿಯಲಾರದೆ ದಣಿದು
ಮಣಿಯಲಾರದೆ ಮಣಿದು. ೧೫

ಬಿಲ್ಲು ಬಿದ್ದಿರಲಿದಿರು
ಒಲ್ಲೆನೆನ್ನುವ ಚದುರು
ಬಾಣವೆದೆ ಸೇರಿಹುದು
ಕಾಣದೊಳಗೂರಿಹುದು. ೧೬

ನೆಲದೊಡೆಯ ಮೇಲೊರಗಿ
ಕಲ್ಲುಮಣ್ಣೊಳು ಬೆರೆತು
ಜಡಕಿಂತ ಜಡವಾದೆ
ತೃಣಕಿಂತ ಕಡೆಯಾದೆ. ೧೭

ಕೊರಡಿನಲಿ ಕೊನರಿಹುದು
ಬರಡಿನಲಿ ಹಯನಿಹುದು
ಮರವಿನಾ ಮರೆಯಲ್ಲಿ
ಅರಿವಿನಾ ತೊರೆ ಅಲ್ಲಿ. ೧೮

ಗಾಳಿಗೊಳಲೆಲ್ಲೆಡೆಗೆ
ಕೇಳುವೊಲು ಕೇಳ್ವವಗೆ
ಸಾರುತಿದೆ ಸವಿಯಲೆಯ
ಮೇಲೆ ಬಾಳಿನ ಕಲೆಯ. ೧೯

ಕನಸು ನಾಡಿನೊಳಲೆತು
ನನಸು ಕಂಡಿಹ ಗುರುತು
ತುಟಿಯ ನಸುನಗೆಯಲ್ಲಿ
ಮಿನುಮಿನುಗುತಿದೆ ಅಲ್ಲಿ. ೨೦

ನಿಜಸುಖದ ನೆಲೆಯರಿತು
ಬದುಕಿದಾ ಕ್ಷಣವನಿತು
ಕೋಟಿಯುಗ ಕಳೆದಿರೆಯು
ನಿತ್ಯನವ ನಸುಕುಹರೆಯು. ೨೧



# ಕೇಳುತಿದೆ ಆಹ್ವಾನ

ಕೇಳುತಿದೆ ಆಹ್ವಾನ ದಿಶೆದಿಶೆಯ ತುದಿಯಿಂದ
ದಳ್ಳುರಿವ ನೆಲದಿಂದ ಜೀವ ಜನದೆದೆಯಿಂದ
ಕೇಳಿಯಲಿ ರಾಜ್ಯಸಾಮ್ರಾಜ್ಯಗಳ ನುಂಗಲಿಹ
ಕಾಲಭೈರವನಿಂದ. ೧

' ಶಾಂತಿಯಲಿ ಪ್ರೀತಿಯಲಿ ಸೊಗಬಾಳು ಬಾಳೋಣ
ಅಂತಿರುವ ಇಂತಿರುವ ' ಎಂದು ಕನಸನು ಕಂಡು
ನೊಂತ ಕವಿಜೀವಕದು ಕೇಳುತಿದೆ ಆಹ್ವಾನ
ಕಿವಿದುಂಬಿ ಎದೆದುಂಬಿ. ೨

ಹೊರಗೆ ಉರಿ ಒಳಗೆ ಉರಿ ಎಲ್ಲಿಯದು ಆಶಾಂತಿ
ಮರುಕವಿಲ್ಲದ ಹಗೆಯು ಜನಜನವ ಮುತ್ತಿರಲು
ಹಿರಿದಾದ ಆ ಪ್ರೀತಿಗೆಲ್ಲಿಯದು ಆಸರೆಯು
ಯಾರು ಕೇಳುವರದನು ? ೩

ಸೊಗಬಾಳೆ ?  ಛೀ ಮರುಳೆ ಸೊಗವೆಲ್ಲಿ ಬಾಳೆಲ್ಲಿ ?
ಜಗದ ಮಾಮಸಣದಲಿ ಹೊತ್ತಿದುರಿಯನು ಸುತ್ತಿ
ನಗುತ ರಿಂಗಣಗುಣಿವ ಪ್ರೇತದಂಪತಿಗಳಿಗೆ
ಸೊಗಬಾಳ ಸವಿಗೇಳು ! ೪

( ೧ )

ವಿಜ್ಞಾನಯುಗವಿಂದು ಜಗವು ಕಿರಿಕಿರಿದಾಯ್ತು
ಸುಜ್ಞಾನವಾಯಿತು ಜನತೆ ಸುಖದ ಸವಿ ಹೆಚ್ಚಿಹುದು
ಅಜ್ಞರಾ ಹಳೆಯಜನವೆಂದು ಹಿರಿಹುಬ್ಬಿನಾ
ಜರ್ಬಿನಲಿ ಹಳಿಯುತಿರೆ— ೫

ಹೊಂಬಿಸಿಲ ಮಾಯೆಯಲಿ ಮೈಮನವು ನೆರೆಮುಸುಕಿ
ನಂಬಿನಡೆದಿರುವ ನವದಂಪತಿಗಳೊಡಲಲ್ಲಿ
ಯೊಮ್ಮೆಲೇ ಕಾರ್ಮೋಡ ಕವಿಕವಿದು ಬರಸಿಡಿಲು
ಬಡಿದಂತೆ ಆಗಿಹುದು. ೬

ಇಂದೆಲ್ಲವೂ ಕುದಿಯಲಿದೆ ಸಾವಿನಾವಿಗೆಯು
ಹೊಂದಿಹುದು, ಕ್ಷೇಮವೆಂಬುದು ಕ್ಷಾಮವೊಂದಕ್ಕೆ
ಸಂದಿಹುದು, ನಾಶವೇ ಲೋಕವನು ಬಿಗಿದಾಳ್ವ
ಹಿರಿಪಾಶವಾಗಿಹುದು. ೭

ಯಾಕೆ ಎಂತಿದು ಎಂದು ಕೇಳುವ ಚಿತ್ತ
ಮೂಕಶೋಕದ ಬಳಿಗೆ ಮರೆಹೊಕ್ಕು ಹುದುಗಿಹುದು
'ನಾಕವನು ಮರೆ ಇಲ್ಲಿ ನರಕವನು ನೋಡಬಾ'
ಎಂದಾರೊ ಕರೆಯುತಿರೆ. ೮

ನಿನ್ನೆಯದೆ ಮೊನ್ನಿನದೆ ಮಾನವರ ಎದೆಯಲ್ಲಿ
ಬಿತ್ತಿರುವ ರಾಗದ್ವೇಷದ ಬೀಜವೇಸೇಸೊ
ಶತಮಾನಗಳ ಗನ್ನಗತಕದಲಿ ಮೊಳೆಯೊಡೆದು
ವಿಷದ ಹೆಮ್ಮರವಾಗಿ— ೯

ನಾಡುನಾಡಿನ ಯುದ್ಧದಲಿ ಹೂತು ಕಾಯಾಗಿ
ಪಾಡಳಿದು ನಾಡುಗರ ಕೋಟಲೆಯ ಕೋಟಿಯಲಿ
ಹಣ್ಣುಬಿಡುತಿಹುದಯ್ಯ ಎಂದೊರೆಯುತಿದೆ ಒದರಿ
ಕಾಲರಾಯನ ಕೊರಲು. ೧೦

ಬಾಂಬುಸುರಿಮಳೆಯಾಗಿ ತೋಪುಗುಂಡುಗಳಾಗಿ
ಹೊಮ್ಮುತಲೆ ಹೊರಸಿಡಿವ ದ್ವೇಷದುಂಡೆಗಳಿಂದ
ಸೋಂಬಳಂತಿಹ ಸರ್ವಸಹೆಯಾದ ಭೂಮಾತೆ
ಕೆರಳಿ ಉರಿಉರಿಯುತಿಹಳು. ೧೧

ಉರಿಯುತಿವೆ ನಗರಗಳು ಹರಿಯುತಿವೆ ರಕ್ತನದಿ
ನರರ ಹೆಣ ಉರುಳುತಿವೆ ಚಿಟ್ಟೆಗಳ ಮೊಟ್ಟೆಯೊಲು
ಕರುಣೆಯೆಂಬುದ ಹೂಳಿ ಪಾತಾಳದಾಳದಲಿ
ಕುಣಿಯುತಿದೆ ಮರಣ ನೆಲದಿ. ೧೨

ಕಿರಿದಾದ ಜಗದಿಂದ ಫಲವೇನು, ಅರಿದಾದ
ಹಿರಿದಾದ ನೋವುನೆರೆ ಎಲ್ಲ ಮೂಲೆಗಳಿಂದ
ತೆರೆಯಾಗಿ ನುಗ್ಗಿ ನೂಕಲು ಮಾಡಿ ಎದೆಗಳನು
ಪ್ರಳಯದಲಿ ಮುಳುಗಿಸಿದೆ. ೧೩

ಯಾವ ಬದಿ ಸತ್ಯವೊ, ಎಲ್ಲಿ ತಪ್ಪಿದೆ ಸೂತ್ರ
ಯಾವುದೂ ತಿಳಿಯಾಗಿ ತಿಳಿಯದಿರೆ, ಹೊಳೆಯುತಿದೆ
ಸಾವಿನದ್ಭುತಲೀಲೆಯೊಂದೆ ಹಿರಿಸತ್ಯವೆನೆ
ಇರಿದಿರಿದು ಕವಿಮನವ. ೧೪

ಹೊಸರಕ್ಕಸರ ತೋರ ಕಾಲ್ತುಳಿತದಲಿ ಜಬ್ಬಿ
ನುಸಿಯಾದ ಕಿರಿರಾಷ್ಟ್ರಗಳ ಪ್ರಜೆ ಬಲುಮೆಯಾ
ಮುಸಿಯುಲದ್ದಿದ ಬೊಂಬೆಯೊಲು ಪಡುವ ಬವಣೆಗಳ
ಕತೆಕುದಿಸೆ ರಕ್ತವನು— ೧೫

ಮನೆಯು ನೆಲಸಮವಾಗೆ ಹಸುಗೂಸುಗಳ ತಬ್ಬಿ
ಗಂಟುಗದಡಿಯುಹೊತ್ತು ಗಾಳಿಯಲಿ ಚಳಿಯಲ್ಲಿ
ಕ್ಷಣಕ್ಷಣಕೆ ಉಸಿರೆಳೆದು ನಡೆವ ಜನಜಂಗುಳಿಯು
ಕಂಬನಿಯನುಕ್ಕಿಸಿದೆ. ೧೬

'ಈ ನೆಲವೆ ಯಮಲೋಕ, ಸತ್ತವರೆ ಸುಖಿಸುಧೆಯು
ಅನಾಕದಜ್ಞಾತಖಂಡವನು ಸೇರಿದರು'
ಎಂದೊರಲಿ ಚೀರುವಂತಿದೆ ಮೇಲೆ ಮೊಗವೆತ್ತಿ
ಬದುಕಿರುವ ಮನುಜಗಣವು. ೧೭

( ೨ )

ಕಾಲಚಕ್ರದ ಘೋರ ಘರ್ಘರದ ಬುಡದಲ್ಲಿ
ಸಿಲುಕಿರುವ ಜಗದಲ್ಲಿ ಭಾರತದ ಸ್ಥಿತಿಗತಿಯು
ಶೂಲಜಾಲವ ಮನದಿ ನೆನೆನೆನೆದು ಕುದಿಕುದಿದು
ಜೀವ ತಲ್ಲಣಿಸುವುದು. ೧೮

ವೇದವಿದ್ಯೆಯ ತವರು ವೀರ-ಧೀರರ ತಾಣ
ಗಾದೆಮಾತಿನ ಕುಂತಿಸುತರಂತೆ ಕಂಗೆಟ್ಟು
ತೊತ್ತುತನದೊತ್ತಿನಲಿ ಹೇಡಿಗಳ ಬೀಡಾಗಿ
ಹಾಳ್ಸುರಿದು ಮೆರೆಯುತಿದೆ. ೧೯

ತನ್ನ ಪುಣ್ಯವನೆಲ್ಲ ಹೆರವರಿಗೆ ಮಾರಿರುವ
ಪುಣ್ಯಭೂಮಿಯು ತನ್ನ ಪ್ರಾಚೀನ ಕರ್ಮತತಿ
ಹಣ್ಣಾಗಿ ದಾಸ್ಯದಲಿ ಲೋಲಾಡಿ ಕೊಳೆಯುತಿಹ
ಕರ್ಮಭೂಮಿಯಿದು ಸೈ ! ೨೦

ಖಂಡಮಾಂಸವ ತಿಂದು ನೆತ್ತರವ ತವೆಹೀರಿ
ತುಂಡುಗೊಳಿಸುವ ಪರರ ಆಳರಸರಾಳ್ಕೆಯಲಿ
ಬೆಂಡಾದ ಅಸ್ಥಿಪಂಜರವುಳಿದ ಸುವಿಶಾಲ—
ಶ್ರೀಭರತಖಂಡವಿದು. ೨೧

ರಾಷ್ಟ್ರವೇ ? ವಿಧವಿಧದ ಜನಭಾಷೆ ಧರ್ಮಗಳ
ಗೋಷ್ಠಿಯಿದು, ಹಿಂಡುದನ, ಹಿಂಡುವಾಕಳುವೆಂದು
ಮುಷ್ಟಿಯಲಿ ಲೀಲೆಯಲಿ ನಾಲ್ವತ್ತು ಕೋಟಿಗಳ
ಬಿಗಿದಜನ ಬಗೆದಿಹರು. ೨೨

ನಿರ್ವೀರ್ಯ ನಿಸ್ತೇಜ ನಿರ್ಧನವು ನಿರ್ಗತಿಕ—
ಭಾರತವು ಕೋಟಿಜನ ಕೋಟಿಮನವಾಗಿದ್ದು

ಪಾರತಂತ್ರ್ಯವೆ ತನ್ನ ಪರಮಾರ್ಥವೆಂಬಂತೆ
ಆಳಾಗಿ ಬಾಳುತಿದೆ. ೨೩

ಅದರಜ್ಞತನ ಮೂಢತನ ಭೇದಗಳ ಕಂಡು
ಎದೆಯುಬ್ಬಿರೋಡಾಡುವರು ತಮ್ಮ ಸಾಮ್ರಾಜ್ಯ-
ಮದದಲ್ಲಿ ಕುಣಿಯುವರು ಅದರಿಂದಲೇ ತಮಗೆ
ಉಳಿವೆಂದು ಅರಿತಿರಲು. ೨೪

ಯುಗಯುಗವು ನೂಗಿದರು ಮನುಜಮದವಳಿದಿಲ್ಲ
ಜಗವು ಪಲ್ಲಟಿಸಿಲ್ಲ ಭಾರತದ ಕಣದಲ್ಲಿ
ಮೊಗವೆತ್ತಿ ಮರುಕಳಿಸಿದಂತಿಹುದು ಕುರುಪಾಂಡವರ
ಕಲಹಪ್ರಪಂಚ. ೨೫

ಮಾನಿನಿಯೆ ದ್ರೌಪದಿಯೆ ಭಾರತದ ಭಾರತಿಯೆ
ಇನ್ನು ಸಹ ದುರ್ಯೋಧನರ ದುಷ್ಟ ದುಶ್ಶಾಸ-
ನಾದಿಗಳ ದುರ್ದಮ್ಯದಾನವೀ ದರ್ಪವದು
ಸರ್ಪದೊಲು ಹೆಡೆಯೆತ್ತಿ— ೨೬

ತಿರುತಿರುಗಿ ವಿಷದುಸಿರು ಬಿಡುತಲಿದೆ, ಭೀಮಾರ್ಜು-
ನರ ಕೋಪಪಾವಕದಿ ರುದ್ರಾವತಾರವನು
ಬರಿಸುತಿದೆ, ಅದಜಾತಶತ್ರುಗಳ ಕೆರಳಿಸುತ
ರಣರಂಗಕೆಳೆಸುತಿದೆ. ೨೭

ಕೇಶಪಾಶವ ತುಡುಕಿಯೋಲಗಕೆ ಹಿಡಿತಂದು
ಹಾಸ್ಯಮಾಡಿದಕೈಯು ಧೀಂಕಿಟ್ಟ ವೈ ತನ್ನ
ನಾಶದೇವತೆಯನ್ನೆ ಬರಮಾಡಿರುವೆನೆಂದು
ಅರಿಯದಿದೆ ಮಾತಾಯಿ ! ೨೮

ಭಯವಿಲ್ಲ ಪಾಂಡವರ ವನವಾಸ ಮುಗಿಯಲಿದೆ,
ದಯವಳಿದು ಸೂಜಿನೆಲವೀಯೆನೆಂದಂಧಸುತ-
ರಯನ ತಿರುಗಲು ತಾವೆ ಭಾರತದ ಕಾಳಗದಿ
ನೆಲವೆಲ್ಲ ತೊರೆಯುವರು. ೨೯

ಮುಕ್ತತೆಯ ಕಾಲ ಬಳಿಸಂದಿಹುದು ಹೊಸಭಕ್ತಿ-
ಶಕ್ತಿಗಳು ಚಿಮ್ಮಿಹವು ಧ್ಯೇಯದಾಹವು ಹೆಚ್ಚಿ
ವ್ಯಕ್ತಿವ್ಯಕ್ತಿಗಳಲ್ಲಿ ತ್ಯಾಗಪರಮಾವಧಿಯು
ಬೇರೂರಿ ನೆಲಸಿಹುದು. ೩೦

ತಲೆಗೊಂದನಾಡುತಿಹ ಮತಪಂಥಗಳ ಜನತೆ
ಕಲೆತು ಒಂದಾಗಿ ಶತಶತಕದೀ ಶೃಂಖಲೆಯ
ಹೊಲೆಕಳೆದು ಮಡಿಯಾಗಿ ನಿನ್ನ ಸಿರಿಯಡಿಗಳಲಿ
ತಲೆಯಿಕ್ಕಿಬಾಗುವುದು. ೩೧

( ೩ )

ಈ ನಿನ್ನ ಲೀಲೆಯಲಿ ನಾನೆಲ್ಲಿ ನಿಂತಿರುವೆ
ನನ್ನ ಬೆಸನವದೇನು ಎಂದು ಯೋಚಿಸುತಿರಲು
ನನಗೆ ನಾ ಸಿಗ್ಗಾಗಿ ಮುದುಡಿ ಮುಗ್ಗರಿಸುವೆನು
ಲೋಕನಾಯಕ ತಂದೆ! ೩೨

ಸುತ್ತುಮುತ್ತಲು ನಡೆದ ನಿನ್ನ ತಾಂಡವದಲ್ಲಿ
ಎತ್ತಿ ಹೆಜ್ಜೆಯನಿಡದೆ ಭಯಭೀತನಾಗಿಹೆನು
ಮತ್ತೆ ನಿನ್ನಯ ರುದ್ರ ಸಂಗೀತ ಮೇಳದಲಿ
ಸೇರದಪಸರ ನಾನು. ೩೩

ಬಾನ್ಗೆಬಾನೇ ಹೊತ್ತಿ ನಕ್ಷತ್ರಕೋಟಿಗಳು
ಮಾಣದುರಿಯುತಿರೆ ನಾ ನನ್ನ ಕಿರುತಂಬಿಗೆಯು

ಮಿಣುಮಿಣುಕಿ ಮಂದವಾಯಿತು ಎಂದು ಮಿಡುಕುವೆನು
ಮೃಗಜಲವ ಬೆಂಬತ್ತಿ. ೩೪

ಪ್ರಳಯಘನವಾತಗಳು ಗಿರಿದರಿಯನಳ್ಳಾಡಿ
ಸೆಳೆದು ಮರಬಳ್ಳಿಗಳ ಬೀಸುತಿರೆ ನಾ ನನ್ನ
ಕೆಳೆಯ ಜೀವವ ತಬ್ಬಿ ಘೂರ್ಣಿಸುವ ಗೂಡಿನಲಿ
ಪೆಳ್ಪಳಿಸಿ ಕುಳಿತಿಹೆನು. ೩೫

ಗೋಳಿಡುವ ನೂರುಸಾವಿರಚೋರಳು ಭೋ ಎನಲು
ಕೇಳುತಿರೆ ನಾಣಿಲಿಯು ಸವಿದುತ್ತ ನುಂಗುವೆನು
ತೂಳತಲ್ಪದ ಮೇಲೆ ಒರಗುವೆನು ಸೊಗಬಯಸಿ
ಮಿದುತನದ ಮುದ್ದೆಯೊಲು. ೩೬

ಬೇತಾಳವಹ ನೆಲದಿ ಧೀರಲಯವನು ತೊರೆದು
ಬೇತಾಳನಾಗಿಹೆನು ಬಾಳನಡೆ ತಪ್ಪಿಹೆನು
ಈ ತ್ಯಾಗಯಾಗದಲಿ ನನ್ನ ಮುಡಿಪನು ಸಲಿಸೆ
ಹೆದರಿ ಮುದುರಿರುವೆನು. ೩೭

ನನ್ನ ಕಿರುಮನೆಯೆಂಬ ಮರಿವಿಶ್ವರೂಪದಲಿ
ಎಂಥ ಶೋಕದ ಸಂತೆ ಜೊಳ್ಳುಬಾಳಿನ ಕಂತೆ
ಸಂತತವು ನಿಟ್ಟುಸಿರ ಮಾಲೆಗಳ ನೈದೊಡವು
ಕಂಬನಿಯ ಅಡಿಪೂಜೆ. ೩೮

ಲೋಕಚರಿತೆಯ ಹಾಗೆ ಎಲ್ಲಿಯೋ ತಪ್ಪಿತಿದು
ಸಾಕುಸಾಕೆಂದು ನಾ ನನ್ನನ್ನೆ ಹಳಿಯುತಿರೆ
ಸಾಕುವುದು ನಿನ್ನ ಕಿರುದನಿಯೆನ್ನ ಆತ್ಮದಾಳದಿ
ನೆಲಸಿ ಮೊಳಗುತಲಿ. ೩೯

ನನ್ನ ವಿಶ್ವದ ಕ್ಷೇಮ ನನಗೆ ಹಿರಿದಾಗಿರಲು
ನನ್ನ ಕರ್ಮದಿ ಮುಕ್ತಿ ನನಗೆ ಅರಿದಾಗಿರಲು
ಅನಂತಾನಂತ ನಾ ತಿಳಿತಿಳಿದು ದುರ್ಬಲನು
ನಿನ್ನ ನಾಟ್ಯದಿ ಬೆರೆವೆನೆ? ೪೦

ಏನು ಬಂದರು ಬರಲಿ ನಿನ್ನ ನೆರೆನಂಬಿರುವೆ
ನಿನ್ನ ಪ್ರೇರಣೆಗಾಗಿ ಕಾದಿಹೆನು ಧ್ಯಾನದಲಿ
ನನ್ನ ಬದುಕಿನ ಗುರಿಯು ದೈವಕಾರ್ಯದ ಪರಿಯು
ನೀ ತೋರೆ ನಾ ಧನ್ಯ! ೪೧



# ವಿನಾಯಕನಿಗೆ

## (೧) ನಾನು :

ಗೆಳೆಯ ಬೆನಕ! ಕನ್ನಡಕ್ಕೆ
ದೊರೆತಪೂರ್ವ ಕನಕ ನಿನಗೆ ನನ್ನ ನೆನಸಿಕೆ
ಬೆಂದು ಬಾಯಿ ತೆರೆದ ನೆಲಕೆ
ತಂಪುಗಾಳಿ ಮಳೆಯ ತೆರದೆ ಬಂದ ಕವನಕೆ. ೧

ನಿನ್ನ ಕೂರುನೋಟ ಕಂಡ
ನನ್ನ ಇರವಿನರಿವು ನನಗೆ ಆತ್ಮದರ್ಶಕ
ನಿನ್ನ ಸ್ನೇಹರಸದ ತಳಿಯು
ನನ್ನ ಬಳ್ಳವಳ್ಳಿಗೆಂಥ ಪ್ರಾಣಪೋಷಕ. ೨

ಸತ್ಯವೆಂಬುದತ್ಯಗಾಧ
ತಾನು ತನ್ನ ತಿಳಿಯೆ ಮೋಹ ಮರೆಸಿ ಮೆರೆವುದು
ಅನ್ಯರದನು ತಿಳಿಯ ಬಯಸೆ
ಅವರ ದೃಷ್ಟಿಯೆಂಬ ತೆರೆಯು ನಡುವೆ ಸರಿವುದು. ೩

ಮೋಹ ಸರಿಸಿ ದೃಷ್ಟಿ ಮೀರಿ
ತಾನು ಪರರು ತಿಳಿಯ ಬುದ್ಧಿಯೆಂಬ ಕನ್ನಡಿ
ಹಿಡಿದು ಜೀವ ಜಗವ ನೋಡೆ
ಮೂಡಬಹುದು ಓಡುತಿರುವ ದಿಟದ ಮೈಯುಡಿ. ೪

ಬಾಳಬನದ ಚಿಟ್ಟೆಯಾದ
ರಸಿಕನಹುದು ನಾನು ಹರುಷಭೋಗ ನಿರ್ಭರ
ಚೆಲುವುಕಂಡು ಕುಣಿದು ತಣಿದು
ಮೊದಲು ತೊದಲಿ ಮುಂದೆ ಉಲಿದೆ ಹಾಡುಸವಿಸರ. ೫

ಬಾಳಿನಲ್ಲಿ ರಸವ ಕಂಡೆ
ಅದನು ಸವಿಯೆ ಬಲವು ಸಾಲದೆಂದು ಕಂಡೆನು
ಅಂತೆ ಮೈಯು ಮನದ ಬಲಕೆ
ಹಂಬಲಿಸುತ ಸಾಧನೆಯಲಿ ಮುಂದುಗಂಡೆನು. ೬

ಒಲವು ಚೆಲವು ನಲಿವು ದಿಟವು
ಬಾಳಕಲೆಯು ಹೂವ ಸುಳ್ಕೆಸಳುಗಳಾಗಲಿ
ನನ್ನ ನುಡಿಯಲದರ ಕಂಪು
ದಿಶೆದಿಶೆಯಲಿ ಹರಡುವಂತೆ ನೆಲಸಿ ನಿಲ್ಲಲಿ. ೭

ಎಂಬ ಹಿರಿಯ ಆಸೆಬಾಸೆ
ಮೂಡಿ ಮೊಳಗೆ ಕೇಳಿಮಧುರಮುಗ್ಧನಾದೆನು
ನನ್ನ ಕಿರಿಯ ಪಾತ್ರೆಯಲ್ಲಿ
ದಿವ್ಯರಸವ ತುಂಬಲೆಂದು ಸಿದ್ಧನಾದೆನು. ೮

ಮೇಲುಬಾಳಿಗಿಂತು ನೋಂತು
ಕನಸುಬಾನಿನಲ್ಲಿ ರೆಕ್ಕೆಹರಡಿ ಹಾರಿರೆ
ಕೆಳಪ್ರಕೃತಿಯು ಎಳೆತಸೆಳೆತ
ನೆಲದ ತೊಡರುಬಳ್ಳಿಯಾಗಿ ಸೆಳೆದು ಸಾರಿರೆ— ೯

ತಪವೆ ನನ್ನ ಉದ್ಧರಣದ
ಜಪವದೆಂದು ಎಂದೊ ನಾನು ಮನದಿ ಅರಿತೆನು
ಧರ್ಮದೃಷ್ಟಿ ನೇಮನಿಷ್ಠೆ
ಅಂದಿನಿಂದ ತಿಳಿವುಗೂಡೆ ನುರಿತೆನು. ೧೦

ಗೆಲ್ಲಕಾಗಿ ಸಾಸಗೈದು
ಅಡಿಯನಿಟ್ಟೆ ಕಡೆಯಲಿಲ್ಲ ಸೋಲುಬಂದಿತು
ಭಯ ನಿರಾಶೆ ಮುತ್ತಿ ಮುಸುಕಿ
ತನ್ನಗೆಲ್ಲದಣಕವಾಡಿ ಹೂಡಿ ನಿಂದಿತು. ೧೧

ಕರ್ಮಲೀಲೆಯರಿತೆನಾಗ
ಕೆಳಗೆ ಬಿದ್ದು ಮತ್ತೆ ಎದ್ದೆ ಹೊಸತುಸಾಸಕೆ
ಜಗವನಾಳ್ವ ದಿವ್ಯಶಕ್ತಿ
ಕೈಯಲೆತ್ತಿ ಕರೆವುದೆನಲು ಹಿರಿಯ ನಂಬಿಕೆ. ೧೨

ಆತ್ಮತತ್ವದಲ್ಲಿ ರಮಿಸಿ
ಧರ್ಮಸಾರವನ್ನು ಗ್ರಹಿಸಿ ಬಾಳ ಬೆಳಸಿದೆ
ಕಡಲ ತೆರೆಯ ಏರು ಇಳಿತ
ತೋರಿ ಹಿಗ್ಗಿ ಕುಗ್ಗಿ ಮುಂದೆ ನುಗ್ಗಲೆಳಸಿದೆ. ೧೩

ನನ್ನ ಹೃದಯಗೀತಗಳಲಿ
ಚಿನ್ನಬನ್ನದಿಂಥ ಬಾಳು ಮೈಯ ತಾಳಿದೆ
ಎಂಥ ನೋವ ಮುಳ್ಳ ಜೊತೆಗೆ
ಮುಂದಣಾಸೆ ಹಿಗ್ಗಿನರಳು ಬಿರಿದು ಬಾಳಿದೆ. ೧೪

ತನ್ನ ಸತ್ಯ ತಾನೆದಿರಿಸಿ
ತನ್ನದಾರಿ ತನ್ನನಡೆಯ ತಾನೆ ಅರಿವುದು
ಕೊನೆಯ ಗುರಿಯದೊಂದೆ ಆಗೆ
ಮನದ ಪರಿಯನರಿತು ಘನಕೆ ಹೂಡುತಿರುವುದು. ೧೫

ಚೆಲುವು ಕಂಡರಸಿಕ ಚಿತ್ತ
ಸ್ವಾತಂತ್ರ್ಯದ ಸವಿಯನುಂಡು ಸಾರಿ ಹಾಡಿದೆ
ಘೋರದುಃಖ ಮೋಹಮಾಯೆ
ಮುತ್ತಿಬರಲು ಸ್ವಾತಂತ್ರ್ಯಕೆ ಬಿಗಿಪುಹೂಡಿದೆ. ೧೬

ಸ್ವಾತಂತ್ರ್ಯವು ನಿಶಿತಧಾರೆ
ಅರಿತು ಹಿರಿಯೆ ಬಾಳವೀರದೊರೆಯು ತಾನು
ಮರೆತು ಹಿಡಿಯೆ ತನ್ನ ಕತ್ತ-
ನಿರಿದು ತಾನೆ ಮುಳುಗಲಿರುವ ರಕ್ತಭಾನು. ೧೭

ಚಿಟ್ಟಿಮನವು ಜೇಡಬಲೆಗೆ
ಸಿಲುಕಿದಾಗ ಮುಕ್ತ ಚೆಲುವದೆಂತು ಉಲಿವುದು?
ಬುದ್ಧಿಗಲ್ಲ ಬಾಳೆ ತೊಡಕು
ಆಗೆ ಚೆಲುವಿನೊಡನೆ ಬೇರೆ ಸ್ವರವು ಬೆರೆವುದು. ೧೮

ರಸದಿ ಇಂತು ವಿರಸಸೇರಿ
ಪರಮರಸದ ಪಾಕಕೆಂದು ಮುಂದುವರಿದಿರೆ
ಸ್ವಾತಂತ್ರ್ಯದ ಧ್ರುವದ ತಾರೆ
ಗುರಿಯುದಾಗೆ ತಪ್ಪದೇನು ತಡೆದು ನಡೆದಿರೆ. ೧೯

ಸಹಜಚಿದ್ವಿಲಾಸ ಮೇರೆ-
ವರಿವುದೆಂಬ ಬರಿಯ ಬಗೆಯ ಎಣಿಕೆಯುಲ್ಲವು
ವಿಧಿಯ ದುರ್ವಿಲಾಸ ಕವಿಯೆ
ಬಾಳ ಕಹಿಯು ಕಲಿಸಿತಯ್ಯ ನೇಮನಿಷ್ಠೆಯು. ೨೦

ಚೆಲುವು ಕಣ್ಗಳಿಂದ ನೋಡಿ
ಹೊಲೆಯ ಕಳೆದು ಇಹದಿ ಮುಕ್ತಿಪಡೆಯಬಲ್ಲೆವು
ಕಣ್ಗೆ ಪರೆಯು ಸಂದಣಿಸಿರೆ
ಕಳೆಯುದದನು ಶುಚಿಯನೆಂತು ಪಡೆಯಬಲ್ಲೆವು? ೨೧

ರಸದ ದೃಷ್ಟಿ ಧರ್ಮದೃಷ್ಟಿ
ಬೆಳೆವ ಬಾಳಕುದಿಗೆ ಸಿಲುಕಿ ತಾಕಲಾಡಿವೆ
ಹೊಸವಿವೇಕದಲ್ಲಿ ಏಕ-
ರಸವದಾಗಿ ಕಿಡಿಹಾರಿಕೆಯನ್ನು ದೂಡಿವೆ. ೨೨

ರಸದಾ ಸ್ವಚ್ಛಂದಛಂದ
ಧರ್ಮನಿಯಮಬಂಧ ಗಂಗೆಯಮುನೆಯಾಗಿದೆ
ಅಲ್ಲಿ ಮಿಂದ ನುಡಿಯ ಮೀನ
ತನ್ನದೊಂದು ಲೀಲೆಯಲ್ಲಿ ಮೂಡಿ ಮುಳುಗಿದೆ. ೨೩

ಆತ್ಮಸೂರ್ಯ ಬದುಕುಮೋಡ-
ಹನಿಯು ಸೇರಿ ಕಾಂಬ ಮಳೆಯ ಬಿಲ್ಲ ಸೌಸವ
ಹೊಂದಿಕೆಯಲಿ ಅಂದವಡೆಯೆ
ಆದರ ಮಿಶ್ರವೆಳಕು ಬಾಳ ಗುರುತುಗೌರವ. ೨೪

ಸಿಚ್ಚಬಾಳಿನಲ್ಲಿ ಎರಡು ಕಿರಣ
ಕಾದುವಂತೆ ಆಗ ಈಗ ತೋರಿ ಮೂಜವು
ತೊಡರುತೋಟಿ ಮೀರಿದಂಥ
ತಿಳಿವಳಿಕೆಯು ತೀವಿ ನೆಲಸೆ ಆದುವೆ ಸಾಜವು. ೨೫

ಚೆಲುವು-ಗೆಯ್ಮೆ, ಬಿಚ್ಚು-ಬಿಗಿವು
ಇದರ ತೋಟಿ ಹಿರಿಯದಲ್ಲ ಇಂದು ನನ್ನಲಿ
ಘೋರಸತ್ಯ-ಹಿರಿಯಗುರಿಯು
ಇದರ ತಾಕಲಾಟವಿಹುದು ಇರವುಕಣದಲಿ. ೨೬

ಮುಂಗಾಣದ ಭವಣೆ ಬಂದು
ಕಂಗೆಡಿಸುತ ಭಯವ ಬಿತ್ತಿ ಬಲವ ಕಸಿದಿರೆ
ಕಟುಸತ್ಯದ ಕೈಕುಲುಕಲು
ಎದೆಸಾಲದೆ ಗುರಿಯು ಮರೆವೆ ಕೆಳಗೆ ಕುಸಿದಿರೆ. ೨೭

ಪೂರ್ಣಬಾಳ ಧ್ರುವವನೆಮ್ಮ
ಮುಂದರಿಯಲು, ಎಲ್ಲಿಂದಲೊ ಬಂದು ಬೆಂತರ
ಹಿಂಗಾಲನು ಎಳೆದು ನನ್ನ
ಮುಂದಡಿಯನು ಕೆಡಪಿ ಕಾಡುತಿಹವು ತರತರ ೨೮

ಹಾಲಿನಂತೆ ಬೆಳ್ಳಗೆಲ್ಲ
ಎಂಬ ಮುಗ್ಧಚಿಗರಿಯಂಥ ಬಾಳಿದಲ್ಲವು
ಮೋಹಮೋಸ ಸುಖದುಃಖವ-
ನರಿತು ನೇರನಡೆದ ಮೃದುಹೃದಯದ ಜೀವವು. ೨೯

ಕನಸುಮನಸಿನಲ್ಲಿ ಕಾಣದಂಥ
ನನಸು ನೂರುತಾಪವಾಗಿ ಸುತ್ತುವರಿಯಲು
ನನ್ನನಡೆಯ ಚ್ಯುತಿಗಳಿಂದ
ವಿಧಿಯು ಅಣಕದುರಿಗೆ ಹೊಯ್ದು ನೆಯ್ಯಸರಿಯನು. ೩೦

ಶಾಪಗ್ರಸ್ತಜೀವನವಿದು
ತನ್ನ ಹರುಷಚೆಲುವೆಯನ್ನು ಬತ್ತಿಸಿಲ್ಲವು
ಗ್ರಹಣಮುಕ್ತಚಂದ್ರನಂತೆ
ಒಯ್ಯೊಯ್ಯನೆ ಪೂರ್ಣಕಾಂತಿ ಪಡೆವುದೆಲ್ಲವು ೩೧

ಸತ್ತ ಮಗುವ ತೂಗುವಂಥ
ಬರಿಯ ಶೋಕಗೀತ ವಿರಳವೆನ್ನಬರೆಹದಿ
ಸತ್ತ ಮಗುವ ಮುದ್ರೆಯಲ್ಲಿ
ಮತ್ತೆ ಬಾಳ ಕನಸುಕಂಡ ಬಗೆಯು ತೋರೆ ಕವನದಿ. ೩೨

ಇಂತಿದೇನೆ ಇರಲಿ ಗೆಳೆಯ
ನೀನರಿತುದು ನಿಜವು, ಫಲಿಸದಿಹುದು ಚೆಲುವಿಕೆ
ದರುಶನವದು ನಿಚ್ಚಳವಿರೆ
ಇಂದುನಾಳೆ ತೋರಬಹುದು ಬಾಳತುಂಬಿಕೆ. ೩೩

* * *

## ( ೨ ) ನೀನು :

ಎಳಮೆಯಲ್ಲಿ ದಿವ್ಯಸ್ನೇಹ-
ರಸವ ಚೆಲುವಿನಾಳ ತಿಳಿವಿನೊಡನೆ ಬೆರಸುತ
ಹನಿಯು ಕಿರಣಸೇರಿಯಾದ
ಬಾನಬಿಲ್ಲಿನಂತೆ ಬಂದೆ ಕೆಳೆಯನರಸುತ. ೧

ನಿನ್ನ ಚೆನ್ನ ಕನಸಿನಲ್ಲಿ
ಮುಳುಗಿ ಮುಗುದನಾಗಿ ಎಳೆಯ ಹರೆಯ ಕಳೆದಿರೆ
ಪರುಷಜಗಕೆ ಬೆಗಡುಗೊಂಡು
ಬಂದ ದೇವಬಾಲನಾದೆ ಶಾಂತಿತಳೆದಿರೆ. ೨

ದೂರಸೀಮೆಯಲ್ಲಿ ಸಂದ
ಕವನಕಥನಗಳಲಿ ಲೀನನಾಗಿ ಆಡಿದೆ
ಕೈಗೆಬಂದ ಮಾತುಕಟ್ಟಿ
ಚಿಕ್ಕೆಯಂತೆ ಲೆಕ್ಕವಿರದ ಕವನಮಾಡಿದೆ. ೩

ಗೆಳೆತನವೇ ಬಯುಸುವೆಲ್ಲ
ಸಿದ್ಧಿಯಾಗಿ ಭಾವಲೋಕವನ್ನೆ ಎಳಸಿದೆ
ಮರೆಯ ಹೂವಿನಂತೆ ವಿನಯ-
ಮೆರೆದು ಲೋಕವರಿಯದಂತೆ ಮತಿಯ ಬೆಳೆಸಿದೆ. ೪

ಕೆಳೆಯ ತಪಕೆ ಸಿತಿತಮತಿಗೆ
ಮೆಚ್ಚಿದಂತೆ ದೈವ ನಿನ್ನ ಬಾಳನೆತ್ತಿಕೊಳ್ಳುತ
ಕೀರ್ತಿಶಿಖರದಲ್ಲಿ ನಿಲಿಸೆ
ತನ್ನಗೆಲವುಗಂಬಗೈದು ಸೋಲುತಳ್ಳುತ. ೫

ಒಮ್ಮೆದೊಮ್ಮೆ ನಿನ್ನಶಕ್ತಿ
ನೆಗೆದೆದ್ದಿತು ಗಾಳಿಪಟದ ಗಾನಮಾಡುತ
ಮುಟ್ಟಿದೆಲ್ಲ ಚಿನ್ನವಾಗೆ
ಬಾಳುಬೆಳೆಯ ಚೆಲುವಗುರಿಗೆ ಚಿತ್ತಹೂಡುತ. ೬

ಕವಿತೆಗೊಬ್ಬ ಗುರುವ ಕಂಡೆ
ಹಿರಿಯ ಕಾವ್ಯದರ್ಶನಕ್ಕೆ ಮನವ ತೆರೆಯುತ
ಕೃತಿಯ ರಚಿಸಿ ಕೃತಿಯ ತೂಗಿ
ಹಿರಿಮೆಗಾಗಿ ವೀಳ್ಯವೆತ್ತಿ ಇರುವೆ ಮೆರೆಯುತ. ೭

ಕವನಸೃಷ್ಟಿ ನಿನ್ನ ಭುವನ-
ದಲ್ಲಿ ಬಿಟ್ಟುಬಿಡದ ಮೇಘವೃಷ್ಟಿ ಸಫಲವು
ನಿನ್ನ ರಚನೆ ಸಹಜ-ಗಾಢ,
ದೃಷ್ಟಿ ಭವ್ಯ, ಚಿತ್ತ ತತ್ತ್ವನಿರತ ಸತ್ವವು. ೮

ಪೂರ್ವಪುಣ್ಯರಾಶಿ ಸೂಸಿ
ದೈವವಿತ್ತ ರಾಜಯೋಗ ನಿನಗೆ ಲಭಿಸಿದೆ
ಕಾಣದಭಯಛತ್ರವಾಗಿ
ನಡೆಸುತಿದ್ದ ಗುರುವ ದಯೆಯ ಹಿರಿಯ ಶುಭವಿದೆ. ೯

ಪರಿಸರಪ್ರಪಂಚದಲ್ಲಿ
ಆಗಈಗ ದುಃಖ ಮಿಕ್ಕು ಮೀರಿ ಬಂದಿದೆ
ಸುತ್ತುಹೊಳೆವ ದೈವಬಲದ
ಪರಿವೇಷವ ಕಂಡು ಸುಗಿದು ತಾನೆ ಸಂದಿದೆ ೧೦

'ನಾಡು ನುಡಿಗೆ ನನ್ನಸೇವೆ
ಮೀಸಲೆ'ಂದು ಬೇಡಿದಾಗ ದೂರದೇಶದಿ
ಕುತ್ತನೆವದಿ ಬಂದ ಮರಣ
ಸರಿಯಿತತ್ತ ಪಾರುಗೊಂಡೆ ನೀನು ಕ್ಲೇಶದಿ. ೧೧

ಹಿರಿಯ ವ್ಯಥೆಯ ಕಣ್ಣಸನ್ನೆ,
ಮುಂದೆ ಮಿಗಿಲು ಜಸದ ಕತೆಯು ನಿನ್ನ ದೈವವು
ಇಂತೆ ಇಹುದು ಅರ್ಥವಿಲ್ಲ-
ವೆಂದರೂ ಪರಾರ್ಥಕಾಗಿ ಶರಣು ಜೀವವು. ೧೨

ಕೆಳಪ್ರಕೃತಿಯ ಅಂಕೆಯಿಂದ
ಪುಣ್ಯ ನಿನ್ನ ಬಾಳ ಬಿಡಿಸಿ ಶುಚಿಯ ಬಿತ್ತಿದೆ
ಮೇಲುನಾಡಿನಲ್ಲಿ ಸೆಳೆವ
ಗಾಳಿಗಳಲಿ ಎಚ್ಚರಿಂದ ಸಾಗುಸುತ್ತಿದೆ. ೧೩

ಆತ್ಮಪ್ರೌಢಿಯುರುಬಿನಲ್ಲಿ
ನಾನು ನನ್ನದೆಂಬ ಜವಳಿನಲ್ಲಿ ಸಿಲುಕದೆ
ನನಗೆ ಗೆಲವು ನಲಿವು ಎಂದು
ಜಗದ ನೋವುಸಾವು ಏಕೆ ಎನಗೆ ಎನ್ನದೆ. ೧೪

ಚೆಲುವುನೋಟ ನಿಚ್ಚಳವೆನೆ
ಕಡುಟೀಕೆಯಹಂಕೃತಿಯ ಬಲೆಗೆ ಬೀಳದೆ
ಸ್ವಪ್ರೀತಿಯ ಮೋಹವಾಯಿ
ಬಲಿಯದಂತೆ ಬಾಳಬೆಳಸು ಅತಿವಿಶಾಲದೆ. ೧೫

ಸಮರ್ಪಣದ ಮುಕ್ತಮನದ
ಆವೇಶದಿ ಸಾಧನೆಯದು ಏಕೆ ಎನ್ನುತ
ಲಹರಿಜೀವನವನು ನಂಬಿ
ಸಾಗರವನು ಮರೆಯಬೇಡವಿದು ಸುನಿಶ್ಚಿತ ೧೬

ನಿನ್ನ ಕಾರ್ಯ ನಿನ್ನ ಕೀರ್ತಿ
ಕೂಡಿ ಹಿಗ್ಗಿ ಕನ್ನಡಕ್ಕೆ ಗುಡಿಯ ಕಟ್ಟಲಿ
ನಿನ್ನ ಆತ್ಮಪ್ರಜ್ಞೆ ಮಾಗಿ
ಶ್ರೇಯಪಥದಿ ನಾಗಿ ಗುರಿಯ ಬೇಗ ಮುಟ್ಟಲಿ. ೧೭

* * *

## ( ೩ ) ನಾನು-ನೀನು :

ಹರಿವ ಕಾಲ ತೆರೆಯ ಮೇಲೆ
ಎಂತೊ ಏನೊ ಸಂಧಿಸಿದೆವು ಕೆಳೆಯು ಕರೆಯಲು
ಒಲವುತಾಯ ಮಕ್ಕಳಾವು
ಒಡಹುಟ್ಟಿದರಂತೆ ಇಹೆವು ಹೃದಯ ಬೆರೆಯಲು. ೧

ನಿನ್ನ ಬೆಸನ ನನ್ನದೆಂದು
ಒಂದುಗೊಂಡು ನಡೆದೆ ಎಂದಿನಿಂದಲು
ನಿನ್ನ ಭಾಗ್ಯ ನನಗೆ ಹಿಗ್ಗು
ನಿನ್ನ ಕೀರ್ತಿಯಲ್ಲಿ ಸವದ ಪಾಲು ಸಂದಲು. ೨

ನನ್ನ ಬಾಳನೆಲೆಯು ನಿನ್ನ
ಚಿಂತೆಯಾಗಿ ದೊರೆತ ಫಲಕೆ ನೀನು ಸುಖಿಸಿದೆ
ನನ್ನ ಘೋರಯಾತನೆಯಲಿ
ಹೃದಯಬೆಂದು ಬಲವನೀವ ನುಡಿಯನಾಡಿದೆ. ೩

ನೋಡೆ ನಮ್ಮ ಪ್ರಕೃತಿ ಭಿನ್ನ,
ನೋಟ ಬೇರೆ, ಬೇರೆ ಬೆಳೆವ ತಿಳಿವ ಮಾಟವು,
ದೈವದಾನ ಬೇರೆಬೇರೆ,
ಬೇರಿನೊಳದ ರಸವೆ ಬೆರಸೆ, ಬೇರೆ ನಾಟವು. ೪

ನಾನು ರಸಿಕ, ಗುಣಕೆ ಲೋಭಿ
ಸಿಹಿಯ ಕಂಡು ಕಹಿಯ ನುಂಗಿ ಸಹಿಸುತಿರುವನು
ನೀನು ಚೆಲುವ ಭೋಕ್ತನಾಗಿ
ಹೊಲ್ಲಕಂಡು ಸಾರುವೆದೆಯ ಬಲದ ಗರುವನು. ೫

ನೀನು ತೀಕ್ಷ್ಣ, ನಾನು ಸೂಕ್ಷ್ಮ,
ನಮ್ಮ ಮತಿಯ ಮಟ್ಟ ಬೇರೆ, ಬೇರೆ ಭಾವನೆ.
ನನಗೆ ಕರ್ಮ, ನಿನಗೆ ಜ್ಞಾನ
ನಾನು ತಪದಿ ನಿಷ್ಠ, ನೀನು ಸಹಜಯೋಗನೆ. ೬

ನೀನು ಚೆಲುವಿನಾರಾಧಕ,
ನಾನು ನಲಿವನರಸುತಿರುವ ರಸದ ಶೋಧಕ
ನಿನ್ನ ಭಕ್ತಿ ಬುದ್ಧಿನಿಷ್ಠ,
ನಾನು ಹೃದಯನಿಷ್ಠ ದಾಸಪದವಿಸಾಧಕ. ೭

ನಿನ್ನ ಕವನ ಗಹನ-ಸಹಜ
ನಿನ್ನ ಬಾಳಿಗಿಂತ ಮೇಲು ಯುಗದ ಜಾಣ್ಮೆಯು
ನನ್ನ ಕವನ ತಪದ ಫಲವು
ತೂಗುಯ್ಯಾಲೆ ಪಡಿನೆಳಲದು ವಿರಳತಾಳ್ಮೆಯು. ೮

ನೀನು ಗೆಲವುಗೌರಿಶಿಖರ-
ದಲ್ಲಿ ನಿಂತೆ ಮೇಲೆ ಹೆಜ್ಜೆಹೆಜ್ಜೆಗೇರುತ
ನಾನು ಸೋಲಕೊಳ್ಳದಲ್ಲಿ
ಕೆಡೆದೆ ವಿಧಿಯು ಬೆನ್ನತಿವಿಯೆ ಕಿಡಿಯ ಕಾರುತ. ೯

ನಿನ್ನದು ಸಂಸಾರವೆಲ್ಲ
ಹಸುರುಹೂವುಹಣ್ಣು ತೀವಿದಂಥ ಉಪವನ
ನನ್ನದೆಲ್ಲ ಚಿಗುರಿ ಕಮರಿ
ಕರಿಕು ಆದ ಹಾಳುನೆಲದ ಬಗೆಯ ಭಣಭಣ. ೧೦

ನೀನು ಭರತಚಕ್ರಿಯಂತೆ
ದಿಗ್ವಿಜಯಿಯು ದರ್ಪಶಾಲಿಯಾತ್ಮಶ್ರದ್ಧನು
ನಾನು ಕಾಮದಾಳು ಕಾಮ-
ರೂಪಿ ಬಾಹುಬಲಿಯು ಭಯವು ನಟ್ಟ ಹೃದಯನು. ೧೧

ಭರತಕಾಮರಂತೆ ನಾವು
ಹೇವದಿಂದ ಕಲಹವಾಡಿ ಸೋತು ಗೆದ್ದೆವು
ವಿರತಿಯಲ್ಲಿ ಮನವು ನೆಟ್ಟು
ಘನದ ಪಥದಿ ಭಿನ್ನಪಯಣಕೆಂದು ಎದ್ದೆವು. ೧೨

ಮೂಡುಪಡುವಲೆಂತೊ ಅಂತೆ
ಕೂಡಿರುವೆವು ಜೋಡಿಯಾಗಿ ಮೋಡಿಮಾಟದಿ
ಬೇಡಲೇನು ಬೇಡ ಏನು
ನೇಹದೀ ಪವಾಡ ಮೆರೆಯಲಾಟದಿ. ೧೩

ವೃತ್ತಿಭೇದ ಕೋಪತಾಪ-
ವಿರಸ-ಹುರುಡುಗಳನು ಒಡ್ಡಿ ಕೆಳೆಯು ಕೆಣಕಿದೆ.
ಸತ್ವಸಾಮ್ಯ ಪ್ರೀತಿರಮ್ಯ-
ರಸವು ಬೆರಸುತೆಮ್ಮ ರಕ್ಷೆಯಾಗಿ ಹೆಣಗಿದೆ. ೧೪

ಬೇರೆ ನಿಜವು, ನಿಜವು ಒಂದೆ
ಬೇರಿನೊಳದ ರಸವು ಒಂದೆ ಒಂದೆ ಎನ್ನುತ
ಬೇರೆಬೇರೆಯಾಗಿ ನಾರಿ
ನಾವು ಇರುವ, ಇರವ ದಿವ್ಯತರುವ ಗೆಯ್ಯುತ. ೧೫



# ಒಂದು ಚಿತ್ರ – ಒಂದು ದರ್ಶನ

ಎಲ್ಲಿಡೆಗೆ ಈ ಚಿತ್ರ ನಿನ್ನಂತೆ ಸರ್ವವ್ಯಾಪಿ
ಗೆಲ್ಲವೇ ಇದು ನಿನ್ನ ವಿಭುತನಕೆ ವಿಶ್ವರೂಪಿ?

ಬೇಸಗೆಯ ಉರಿಬಿಸಿಲು, ರಣಗುಡುವ ಬರಿಬಯಲು
ತುಳಿತುಳಿದು ನೆಗ್ಗಿರುವ ದಾರಿಯೊಂದು
ತನಗೆ ತಾ ನೆರಳಾಗಿ ನಿಂತಿಹುದು ಅದರಲ್ಲಿ
ಮನುಜನೆನೆ ಕರೆಗೊಳ್ಳ ಪರಿಜದೊಂದು. ೧

ಮೈಯೆಂತೆ? ಎಲುಬುಹಂದರ ಹೊದಿಸಿದಂತಿರುವ
ಮುದುಡುತೊಗಲಿನ ಬೆದರುಬೆಚ್ಚವೇ ಸೈ.
ಮೈಮೇಲಿಯೆ? ತೆರವಿಲ್ಲ ತುಂಬೆಲ್ಲ ಹರಹರಕು
ಚಿಂದಿಗಳ ಗೊಂದಣವು ಹೇಳಲೇನೈ. ೨

ಮುಸುಡಿಯಲಿ ಜಡೆಗೂದಲಿನ ಇರುಳು, ಕಣ್ಣಲ್ಲಿ
ಕುರುಡುಕಗ್ಗತ್ತಲೆಯು, ಕೈಗೆ ಕೋಲು
ಮುದಿಗಾಲ್ಗೆ ಕೊಳೆಚಿಂದಿಗಳ ಕಾಲ ಕುಪ್ಪಸವು
ಮುನ್ನಡೆಯಲೆಳಸುತಿದೆ ಜೀವ ಮೇಲು. ೩

ನಿಮಿಷನಿಮಿಷಕೆ ತಡೆದು ಅಡಿಯೊಂದನೆತ್ತಿಡುತ-
ನಡೆವುದೆಂದರೆ ಎಂಥ ದಂದುಗವದು!
ಹಿರಿಯು ಹವ್ಯಾಸಕ್ಕೆ ಕಿರಿಕಿರಿದು ಬಲವಾಗಿ
ಹೊರಟ ಚೇತನದ ಗತಿ ಮಂದವಹುದು! ೪

ನಿನ್ನ ಸೃಷ್ಟಿಗೆ ಮುಕುಟಮಣಿಯೊಂದು ಕನವರಿಸಿ
ಮಾನವನ ನಿರ್ಮಿಸಿದ ನೆಲದಲ್ಲಿಯೆ
ಮಸಣಕ್ಕೆ ಹೇವರಿಸಿ ಹೊಡೆಮರಳಿ ಹೊರಟಿದ್ದ
ಹೆಣದಂಥ ಮೈಕಂಡೆ ಎದೆಯು ಬೇಯೆ. ೫

ಗತಿಮಂದ ಮತಿಮಂದ, ಬದುಕಲಾರದೆ ಬದುಕಿ
ಕಾಣದೆಡೆ ಹೊರಟಿರುವ ನೀ ಕಂಗಳ.
ನೆಲಬಾನುಗಳ ನಿಚ್ಚ ಚೆಲುವಿಕೆಯ ಮೊಗದಲ್ಲಿ
ತೊಡೆಯುತ್ತ ತನ್ನಿರವಿನಾ ಕಜ್ಜಳ. ೬

ಅವನೊಬ್ಬನೇ ? ತಂದೆ ! ಹೋದಲ್ಲಿ ಬಂದಲ್ಲಿ
ಅವನಂಥ ನೂರಾರು ಚಿತ್ರ ಕಂಡೆ
ನೂರು ಚಿತ್ರದ ಒಳಗೆ ನಿಂತು ಕಾಣುತಲಿರುವ
ಮಾನವತೆಯಿಂದಿನಾ ಚಿತ್ರ ಕಂಡೆ. ೭

ಹೊಲೆತನದ ಬಲಹೀನ ಬೊಂಬೆಗಳ ಅಲುಗಾಟ
ಎಲ್ಲೆಲ್ಲು ಕಣ್ಣಾಲಿಯನು ತುಂಬಿದೆ
ಹೇಸಿಕೆಯ ವಾರಾಶಿಯಲಿ ಹವಳಮುತ್ತಿನೊಲು
ಆಗಾಗ ಚೆಲುವುಗೆಲವಿಗೆ ಇಂಬಿದೆ. ೮

ನೆಲಕಾಗಿ ಬಲಕಾಗಿ ಹಣಕಾಗಿ ಹೆಣಗುತಿಹ
ಜನಜಂಗುಳಿಯ ಕುರುಡುಹೋರಾಟದಿ
ಕಾಡುಮೃಗಗಳ ಹಾಗೆ ಕಾದಾಡಿ ಮಡಿಯುತಿಹ
ಮಾನವರ ಕಾಡುಬಾಳಿನ ಆಟದಿ— ೯

ಮರಮರಳಿ ಅಳಿಯಾಸೆ-ಅಹಂಕಾರಗಳ ಸುಳಿಗೆ
ಸಿಲುಕಿ ಮುಂದರಿಯದಿಹ ಜೀವಗಣದಿ
ಬೆಳಗೆ ಬರಿಕನಸಾದ ಮನೆಮಗುವಿನಲಿ ನನ್ನ
ಜಡಜೀವನದಿ ಆದುವೆ ಚಿತ್ರ ಮನದಿ. ೧೦

* * *

ಎಲ್ಲವೂ ಸುಂದರವು ದರುಶನಕೆ ನಿನ್ನ ಲೀಲೆ.
ಹೊಲ್ಲಕೂ ಚೆಲುವುಂಟು ಲೀಲೆಯಲಿ ಮಿಂದ ಮೇಲೆ.

ಹೊರಗಣ್ಣ್ಗೆ ಹೊಲೆಯಾದ ಕಂಗಳನ ನೋಟವದು
ತೆರೆದ ಕಣ್ಣಿಗೆ ನಿನ್ನ ಆಟಬಗೆಯು.
ಚೆಲುವಿಕೆಯು ನಿಧಿಯಾಗಿ ನೀ ಪಡೆದ ಚಂದ್ರನಲಿ
ಚೆಲ್ಲಕಿರಿಸಿದ ಒಂದು ಕುಂದುಕಲೆಯು. ೧೧

ಕಣ್ಗೆ ಕಾಡಿಗೆಯಂತೆ ಮೊಗಕೆ ಮುಚ್ಚದ ಹಾಗೆ
ಚೆಲುವಿಗೀ ಹೊಲೆ ಚೆಲುವ ಹೆಚ್ಚಿಸುವುದು.
ಎಂದಿನಿಂದಲೊ ಏನೊ ವಿಧವಿಧದ ಆಟಗೆಯು
ವಿಶ್ವದಾಟವು ನಿನ್ನ ಮೆಚ್ಚಿಸಿಹುದು. ೧೨

ಹೆರರ ಕಣ್ಣಲಿ ಬೆರಳು ಚುಚ್ಚಿ ನಲಿಯುವ ಅಗಡು-
ತನದಾಟವಲ್ಲವೈ ನಿನ್ನ ಲೀಲೆ
ಎಲ್ಲದರ ಎದೆಯಲ್ಲಿ ಹುದುಗಿರುವ ಹಿರಿಯೊಲವೆ!
ಪ್ರೀತಿಸುತ ಆಡುತಿಹೆ ಮನವು ಸೋಲೆ. ೧೩

ಪರ-ಅವರ ಪ್ರಕೃತಿಯನು ನಿನ್ನಾಟಬುಗುರಿಯನು
ಮಾಡಿ ನೀ ತಿರುಗಿಸಲು ಪೂರ್ಣಪುರುಷ
ಅದರ ನಸುಬೀಳೇಳು ಕಾಲಶಕಲದ ಕಣ್ಗೆ
ಹಾಳೆಂದು ತೋರುವವು ಅಳಿಯೆ ಹರುಷ. ೧೪

ಗುಣತ್ರಯದ ತರತರದ ಜೀವಜಾತವ ನೀನು
ದೇಹದೋಣಿಗಳಲ್ಲಿ ತೇಲಿಬಿಡಲು
ಬಾಳ ಹೊನಲಿನ ಮೇಲೆ ಮುಂದೆ ಸಾಗುತಲಿಹವು
ಕಾಣದಾ ನಾವಾಡಿ ನೀನೆ ಇರಲು. ೧೫

ನೀನೆ ವಾಹಕ ನೀನೆ ತಾರಕನೆ ಆದರೂ
ನೀನಿತ್ತ ಸ್ವಚ್ಛಂದ ಬಲದಿ ಬೆರೆದು
ಮೂಡುವವು ಮುಳುಗುವವು ಪ್ರಕೃತಿಯನು ಬೆಂಬತ್ತಿ
ತಮ್ಮ ಕರ್ಮದ ಕಥೆಯ ತಾವೆ ಬರೆದು. ೧೬

ನಾ ಕಂಡ ಕಂಗಳನು ತನ್ನ ಕರ್ಮದ ಹೊಲೆಯು
ಹೊತ್ತ ಹೊರೆಕಾರನಾಗಿಂತು ಇಹನು
ಜನ್ಮಯಾತ್ರೆಯಲೀಗ ಕರ್ಮಕರಗಿಸುತಿದ್ದು
ಸರಿದಾರಿಯಲಿ ಮುಂದೆ ಬಂದೆ ಬಹನು. ೧೭

ಕರೆದುಕೊಳ್ಳುವುದಯ್ಯ ಕೈಚಾಚಿ ನಿನ್ನೊಲವು
ಹನಿಯ ಬೇಡಲು ಹಿರಿಯ ಹೊಳೆಯು ಹರಿಸಿ
ಕರ್ಮನಿಯತಿಯ ಮೀರಿ ನಿಂತ ಪ್ರೀತಿಯ ಋತದ
ಸತ್ಯಸೌಂದರ್ಯವನು ಪ್ರಕಟಗೊಳಿಸಿ. ೧೮

ಹೊಲೆಯಂತರಂಗದಲಿ ಕರ್ಮದಾಂತರ್ಯದಲಿ
ನೆಲೆನಿಂತ ಚೆಲುವೊಲವಗವ್ಯವಹುದು
ಅರಿತವರಿಗೂ ಅರಿದು ಅನುಭವಕೆ ಹಿರಿಹಿರಿದು
ಬಾಳುವೆಯ ಮಾಯಾತ್ರೆ ದಿವ್ಯವಹುದು. ೧೯

ಇಂದು ನಾ ಕಾಣುತಿಹ ಎಲ್ಲೆಡೆಯ ಹೊಲೆತನವು
ಮುಂದೆ ಬಹ ಚೆಲುವಿಕೆಗೆ ಸಂಚಕಾರ
ಎಂಬ ಭಾವವು ಮುತ್ತಿ ತುಂಬಿದಾನಂದದಲಿ
ತಲ್ಲೀನವಾಗುವೆನು ಇಳಿದು ಭಾರ. ೨೦

ಇಂದು ನನ್ನಲಿ ನನ್ನ ಸಂಸಾರಚಿತ್ರದಲಿ
ಸುತ್ತಲಿಹ ಮಾನವತೆಯಿರವಿನಲ್ಲಿ
ತೋರುತಿಹ ಮಂದಗತಿ ತಾಮಸದ ಜಂಜಡವು
ಕರಗುವುದು ನೇಸರನ ಇದಿರಿನಲ್ಲಿ. ೨೧

ಹೊಲೆಯೆನಿತು ಹಿರಿದನಿತು ಚೆಲುವಿಕೆಯ ಬರವಿಂಗೆ
ತಪದ ದಾರಿಯು ತುಳಿದು ನಡೆಯಬೇಕು
ದಾರಿಹರಳುಗಳೆಂದು ಜನ್ಮಗಳ ತುಳಿದೊಗೆದು
ಕೊನೆಯ ಸಿದ್ಧಿಯನೆಳಸಿ ಪಡೆಯಬೇಕು. ೨೨

ಎಲ್ಲ ಚೇತನಗಳಲಿ ಮಾನವತೆಯೆದೆಯಲ್ಲಿ
ನೀ ನೆಲಸಿ ನಡೆದಿರುವೆ ವಿಶ್ವಾತ್ಮನೆ!
ಹಿರಿಯ ಸಿದ್ಧಿಗೆ ಹಿರಿಯ ಯಾತನೆ ದಿಟವು
ನಿಂತುದೆಂಬುದು ಕೂಡ ಗತಿಯು ತಾನೆ. ೨೩

ಮಾತಾಯಿ! ಮಾಕರುಣೆ! ನಿನ್ನ ದರುಶನವೆಂದೊ
ಈ ನಿನ್ನ ಬಾಳ ದರುಶನವು ನನಗೆ
ಹಿರಿದಾರಿದೀಪದೊಲು ಕರೆದೊಯ್ಯುತಿರಲಿನ್ನ
ಮನದಿ ನಡೆನುಡಿಯಲ್ಲಿ ಮಿನುಮಿನುಗೆ. ೨೪



# ಸಿದ್ಧಿಯ ಸೆರಗು

ಚಿತ್ತ ಚಂಚಲ
ಆತ್ಮ ಅವಿಚಲ
ಚಿತ್ತ ಆತ್ಮದ ನಡುವೆ ಎಂತಹ ಕೊರಕಲು!
ಚಿತ್ತ ಪಳಗಿಸು
ಆತ್ಮ ಬೆಳಗಿಸು
ಎರಡಬೆರಸುವುದೊಲವುನಲಿವಿನ ಸೇತುವು.
ಅರಿವು ಅರಿದೇ?
ತಿಳಿವು ಹಿರಿದೇ?
ಅರಿವು ತಿಳಿವಿನ ಇರವು ಮಾತ್ರವೆ ಅರಿದದು.
ಬಾಳ ಬನದಲಿ
ಒಂದು ಚಣದಲಿ
ಅಮೃತ ಉಂಡೆಯ? ಅದುವೆ ಸಿದ್ಧಿಯ ಸೆರಗದು.



# ಹಾರೈಕೆ

ಭಯುವು ಹೊರಗೆ ಭಯುವು ಒಳಗೆ
ಗಾಳಿಗುಂಟ ಮೇಲೆ ಕೆಳಗೆ
ಬಾಳಿದೇನು ಸಾವುತುತ್ತು
ಚಿಂತೆಸಂತೆ, ಹಗೆಯ ಹುತ್ತು
ನೆನವು ನೋವು ಮರವೆ ಸುಖವು
ಕನಸಿನಲ್ಲಿ ಕನವರಿಕೆಯು.
ಅಭಯು ! ಇಂತಿದೇನೆ ಇರಲು
ಇದರ ಮರೆಗೆ ನೀನು ನಿಲಲು
ಜೀವಜಾತವೆಲ್ಲವನ್ನು
ಶುಭದ ಗುರಿಗೆ ನಡೆಸಿ ಚೆನ್ನು
ಸಾಧಿಸುತಿಹೆ ಎಂಬ ದರುಶನ
ಮೂಡಿ ಮೊಳಗುತಿರಲಿ ದಿನದಿನ.



# ಪರಿಮಳ

ದಿವ್ಯಕರುಣೆಯ ಹೂವು 'ಪರಿಮಳ'!
ಘಮಘಮಿಸುತೆಯ್ತಂದೆ ಮಂಗಳೆ ಮುದ್ದುಮಗಳೇ!
ಹೂವುಹೂವಿನ ಕಂಪುಗಾಣದೆ
ಕಂದಿದೀ ಮನೆಯಂಗಳದಿ ನೀ ತುಂಬಿ ತುಳ್ಕಿದೆ. ೧

ನೆನೆಯ ಬಾರದ ಘೋರದುಃಖದಿ
ಭಯವು ಬಲಿತಿರೆ ಆಶೆಯೆಲ್ಲವು ಕುಸಿದು ಕಂದರದಿ
ಬಾಳಹಂದರ ಬಾಡಲಿಹುದೆನೆ
ಕೊರಗೆ ಜೀವವು ಬಂದ ಬರವೇನದುವೆ ನನೆಕೊನೆ. ೨

ನಿನ್ನ ಬರವಿನ ಕಂಪುಕಡಲೊಳು
ಮುಳುಗಿಯೆದ್ದಿತು ಜೀವವರಳಿತು ನಲಿದು ತನ್ನೊಳು
ಹಳೆಯ ನೋವುಗಳೆಲ್ಲ ತಿಳಿಯದೆ
ಮುಳುಗಿ ಹೋದೊಲು ಮನೆಯು ಪರಿಮಳಮಯವೆ ಆಗಿದೆ. ೩

ಬಾಳ ಹೊಸ ದರುಶನವೆ ಇಳಿದೊಲು
ಕಾಳಕತ್ತಲೆಯಲ್ಲಿ ಝಗ್ಗನೆ ಜೋತಿ ಸುಳಿದೊಲು
ಬಂದೆ ನೀ ಭಯವೆಲ್ಲವೋಡಿಸಿ
ಪ್ರೀತಿವಿಶ್ವಾಸಗಳ ಸುತ್ತಲು ಗಾಳಿಯಾಡಿಸಿ. ೪

ನಿನ್ನ ಬೆಳಗೆಯ ಆಟಪಾಟವು
ಕಣ್ಣನೋಟವು ಮೊದಲ ತೊದಲಿಕೆ ವೈಯ ಮಾಟವು
ಎಲ್ಲವೂ ಹಿರಿಸುಖದ ಸುಗ್ಗಿಯು
ಊಡಿದಂತೆಯೆ ನಿಚ್ಚಹೊಸತಾದಮೃತದೂಟವು. ೫

ನಿನ್ನ ತುಟಿಯಲಿ ಮಿನುಗುವಾ ನಗೆ
ನಮ್ಮ ಬಗೆಗತ್ತಲೆಯನೊಮ್ಮೆಲೆ ಚೆದರಿಸುವೊಸಗೆ
ನಮ್ಮ ಕಂಡೊಡ ನೀನು ಸಾಗರ—
ಬೀಳುತ್ತೈತರೆ ತೆರೆವುದೆದೆಯಲಿ ಪ್ರೀತಿಸಾಗರ. ೬

ಬೆಳೆವ ನಿನ್ನಯ ಅಳುವ ದನಿಯೂ
ಅಮರಲೋಕದ ಗಾನದೈಸಿರಿಗಿಂತ ಸವಿಯೂ
ನೀನು ನೆಲದಲಿ ಹೊಟ್ಟೆಸರಿಯುತ
ಹೊಸೆದರೇಕದೊ ಹರುಷ ನೆಗೆವುದು ಮುಗಿಲಸಾರುತ. ೭

ನಿನ್ನ ಸಲುವಾಗೆಮ್ಮ ಸೇವೆಯು
ನಿತ್ಯಮೀಸಲು ಯಾವ ತ್ಯಾಗಕು ಸಿದ್ಧ ಜೀವವು
ಪಡುವ ಭವಣೆಯೆ ನಮ್ಮ ಭಕುತಿಯು
ನಿನ್ನಯಪ್ಪುಗೆಯೊಂಡೆ ಸಾಲದೆ ಅದಕೆ ಮುಕುತಿಯು. ೮

ನಿನ್ನ ಸಂನಿಧಿಸುಖವನುಣ್ಣುತ
ದುಕ್ಕಸವಿಯನು ನಾವು ಸವಿದೆವು ಇಂದು ಹಣ್ಣುತ
ದೈವ ನೀಡಿದ ಮುನ್ನಕೊರಗಿಗೆ
ಹೇಗೊ ಈಗಳೆ ರುಚಿಯು ದೊರೆಯಿತು ಶುಚಿಯ ಬರವಿಗೆ. ೯

ನಮ್ಮ ಬಾಳಿನ ಕಲ್ಪಲತೆಯೇ!
ಒಳಗುಹೊರಗನು ತುಂಬಿ ಸೂಸುವ ಕಂಪಿನೊರತೆಯೆ!
ಬಾಳು ತುಂಬಿತು ತಿಳಿವು ಮಾಗಿತು
ಬಂದುದೆಲ್ಲವು ಕರುಣೆಕಾಣಿಕೆಯೆಂದು ಕೂಗಿತು—
ಜೀವ ಸಾಗಿತು. ೧೦

# ಮೂಕತೆ

ಯಾಕೆ ಮೂಕತೆಯೆನ್ನ ಚಿತ್ತವನು ಮುತ್ತಿಹುದು ?
ಯಾಕೆ ಹಾಡಿನ ಹಕ್ಕಿ ಕತ್ತನೆತ್ತದೆ ಇಹುದು ? ಪ.

ತೆರೆದೊಲಿದ ಕಣ್ಣಿಂದ ಬಾಳ ನೋಡುತಲಿಹೆನು
ಚೆಲುವಿಕೆಯನಂತ-ನವಲೀಲೆಯಲಿ ಮುಳುಗಿಹೆನು
ಕಲೆಯ ಕಡಲಿನ ಕನ್ನೆ ಸನ್ನೆಯಲಿ ಕರೆಯುತಿರೆ
ಒಲಿಯದೇಕೀ ಕರುಳು, ಉಲಿಯದೇಕೀ ಕೊರಳು ? ೧

ಚಣಚಣಕೆ ಕಣ್ಣೆದಿರು ಕಾಣುವ ಪವಾಡವನು
ದಿನದಿನದ ನೋವುನಲಿವಿನಗಾಧದೃಶ್ಯವನು
ಹೆಣೆಯಲಿಕೆ ಕೃತಿಯಾಗಿ ಹಂಬಲಿಸುತಿರೆ ಜೀವ
ಅಣಿಯಾದ ರಸಝರಿಯ ಹರಿವ ತಡೆಯುವುದೇನು ? ೨

ಸಂಜೆಮುಂಜಾವುಗಳ ಮುಗಿಲ ಬಂಗಾರವನು
ಕಣ್ಣಕೋಶದೊಳಿರಿಸಿ ಚೆಂದೊಡವುಗಳ ಗೆಯ್ದು
ನುಣ್ಣನೆಯ ರಸಿಕಹೃದಯಕೆ ತೊಡಿಸಿ ಮೆರೆವೆನೆನೆ
ಅಂಜಿಸುವುದಾವುದದು ವಿಹರಿಸುವ ವಾಣಿಯನು ? ೩

ಜೀವನದ ತರತರದ ಘೋರ ಸುಂದರ ಕಥೆಯ
ಭಾವಸಾಗರದೊಳದ ಲೇಸುಮೋಸಗಳನ್ನು
ತೀವೆ ಬಣ್ಣನೆಯಿಂದ ಸಾಲದೀ ಮುಗಿಲೆನಲು
ಹೇವವಾವುದು ಕೈಯ ಕಟ್ಟಿಹುದು ಬೆಟ್ಟಿತಾಗಿ. ೪

ಕವಿಯಾಗಿ ಕಂಡುದದು ಕಾಂಬುದದು ನಿಜನಿಜವು
ಹವೆಗಿಂತ ಹಗುರಾಗೆ ನಲಿವುಕ್ಕಿ ಸೂಸುವುದು
ನಿಚ್ಚನಾರದನಾಗಿ ವಿಶ್ವಸಂಗೀತವನು
ಮೆಚ್ಚಿ ಹಾಡುವೆನೆಂದು ಹಾತೊರೆಯುತಿಹುದೆದೆಯು. ೫

ಎಚ್ಚರಾದರು ಕೂಡ ಮಾತೇಳದವನಂತೆ
ಪೆಚ್ಚುತನದಲಿ ನಿಯತಿಚಕ್ರದಲಿ ನಾ ನಡೆಯೆ
' ಮೂಕತೆಯು ಪಾಕಕ್ಕೆ ; ತಡೆ ಮಿಗಿಲು ಪಡೆ ' ಯೆಂಬ
ಮೂಕಪ್ರಕೃತಿಯ ಮಾತೆ ಇಂದಿನಾಸರೆಯಾಯ್ತೆ ? ೬



# ಮುಗಿಯಲಿಹ ವರುಷ (೧೯೪೪)

ಮುಗಿಯಲಿಹ ಈ ವರುಷ
ತಂದಿತೇ ಚಿರಹರುಷ
ಎಂದೊಮ್ಮೆ ಕೇಳಿದೆನು ನನ್ನ ನಾನು
ಹಿಂದಿರುಗಿ ನೋಡಿದೆನು ಬಾಳುವೆಯನು. ೧

ನನ್ನ ಜೀವನವೆಂಬ
ಪಿಂಡ ಬ್ರಹ್ಮಾಂಡದಲಿ
ಪಂಚಭೂತಗಳಾಟ ಮುಂದರಿದಿದೆ
ಆತ್ಮಸೂರ್ಯನ ಕಿರಣ ಹಿಂಜರಿದಿದೆ. ೨

ಕಾಲಕಾಲಕೆ ಜೀವ
ಮೇಲುಮೇಲಕೆ ನೋಡಿ
ಶಿಖರವನು ಕಂಡ ಸಾಸಿಗನಂತೆಯೆ
ಏರೇರಿ ಜಾರುತಿದೆ ಹುಳದಂತೆಯೆ. ೩

ಆಸೆಗಂತವೆ ಇಲ್ಲ
ದಿನದಿನವು ಹೊಸಹೊಂಚು
ಮೂಡುವವು ಮುಳುಗುವವು ಸೂರ್ಯನೊಡನೆ
ಕನಸುಗಳು ಕರಗುವವು ರಾತ್ರಿಯೊಡನೆ. ೪

ಚಿಂತೆ ಬೇಕಾದನಿತು
ಇದ್ದರೂ ನಿಶ್ಚಿಂತೆ-
ಯಲಿ ಬಾಳ್ವೆ ಎಂದುಸುರಿ ಮುಂಬರಿವೆನು
ಮರುಚಣವೆ ಚಿಂತೆಬರೆ ತತ್ತರಿಪೆನು ೫

ಪಡೆವ ಬಗೆಯರಿತರೂ
ಚಿತ್ತಶಾಂತಿಯು ಪಡೆಯೆ
ಪಟ್ಟ ದುಃಖದ ನಟ್ಟ ಬಾಣಗಳನು
ತೊಟ್ಟು ನಡೆದಿಹ ಜಿಂಕೆಯಾಗಿರುವೆನು. ೬

ಜಗವೆಲ್ಲ ಜನವೆಲ್ಲ
ಇಂತೆ ಬಾಳುವುದೆಲ್ಲ
ಒಳಯುದ್ಧ ಹೊರಯುದ್ಧಗಳ ತುಮುಲದಿ
ವ್ಯೈಮನವು ಸೋತು ತೊತ್ತಳದುಳಿತದಿ. ೭

ನಾಲ್ಕು ವರುಷದಿ ನಡೆದ
ಎರಡನೆಯ ಮಾಯುದ್ಧ
ಮುಗಿವುದೆಂಬುವ ಹರುಷ ಚಿಮ್ಮಿರುವುದು
ದುಃಖ ಮುಗಿಯಿತೆ ಎಂದು ಕೇಳಲಿಹುದು. ೮

ಉಧ್ವಸ್ತ ನಗರಗಳು
ನೆಲಕಂಡ ಹೆಣಬಣವೆ
ಹಸಿದು ಶಾಪಿಸಿ ಮಡಿದ ಜೀವಗಣವು :
ಯಾತಕಿದು ಈ ಮಸಣ ? ತಿಳಿಯಲರಿದು. ೯

ನಾಲ್ಕು ಅಂಕೆಗಳುಳ್ಳ
ಈ ವರುಷ ತಂದಿತೇ
ನಾಲ್ಕು ಸ್ವಾತಂತ್ರ್ಯಗಳ, ಕೇಳ್ವರಾರು ?
ಕೇಳಿದರೆ ಕೊಡುವವರು ಯಾರು ಯಾರು ? ೧೦

ಹಣ್ಣಿನಲಿ ಬೀಜ-
ವವಿತಂತೆ ಯಾವುದದೊ
ಸರಿ, ಕೆಡಕೊ ಅಡಗಿಹುದು ಈ ವರುಷದೆ
ಮುಗಿದ ಮುಷ್ಟಿಯ ಬಿಚ್ಚಿ ಹೇಳಬಹುದೆ ? ೧೧

# ಜಾದುಗಾರಿಕೆ

ಕೆಮ್ಮೊಗದ ಯುವಕನೊಬ್ಬನು ಒಂದುದಿನ ಸಂಜೆ
ವಿದ್ಯಾಲಯಕೆ ಬಂದು ಪಡೆದ ಪ್ರಶಸ್ತಿಗಳ
ಸುರುಳಿಯನು ಉಚ್ಚಿ ತಾ ಜಾದುಮಾಡುವೆನೆಂದು
ಜಂಬವನು ಕೊಚ್ಚಿ ಬೆಲೆಪಡೆದು ಕಿಡಿಗೇಡಿ ಸಭೆ-
ಯಿದಿರಿನಿಸು ಹೆದರದಲೆ ಹೂಡಿದನು ತನ್ನಾಟ.
ದೋಷವನು ಕೆದಕಿ ನೋಡುವ ನೂರು ಯುವಜನದ
ಕಣ್ಣೆಲ್ಲ ನಟ್ಟಿರಲು, ದೃಷ್ಟಿಯಾದಂತವನ
ಒಂದೊಂದೆ ಜಾದುಗಳು ಜೊಳ್ಳಾಗಿ ತೋರಿದವು :
ಎಲೆಯಾಟ, ಬ್ರೆಡ್ಡಿನಲಿ ಗಡಿಯಾರ, ಕುತ್ತಿಗೆಗೆ
ಬಿಗಿಯುರಲು ಎಲ್ಲವೂ ಹುಸಿಬಾಣವಾಗಿರಲು
ಅಕ್ಕಿಯದು ಅನ್ನವಾಗದೆ ಹೋಯ್ತು, ಪಾರಿವದ
ಕೊರಳನ್ನು ಕೊಯ್ದು ಕೂಡಿಸುವದಲ್ಲುಳಿಯಿತು.
ನಗೆ, ಅಣಕ, ಹೋ ಎಂಬ ಕೂಗುಗಳು ತುಂಬಿದವು
ಸಭಾಮುಂದಿರವನಕೊ ಆಗ ಅದೆ ನಡೆಕಲಿತ
ತುಂಬುಗಲ್ಲದ ಎಳೆಯ ಮಗುವೊಂದು ತನ್ನಾಟ-
ದಲಿ ತೊಡಗಿ ಪುಟಪುಟನೆ ನಡೆಯುತ್ತ ಯಾರನೂ
ಲೆಕ್ಕಿಸದೆ ವ್ಯಾಸಪೀಠದ ಕೆಳಗೆ ಅಲೆಯುತಿಹುದು.
ಏನನೋ ವಟವಟಿಸಿ ಜನದ ನಗೆಯೊಳು ತನ್ನ
ನಗೆಯ ತೆರೆಬೆರಸುವುದು. ಏನು ಮುದ್ದಿನ ಮೂರ್ತಿ !
ಏನು ಕಣ್ಣಿನ ಕಾಂತಿ ! ಮೊಗದಿ ಮೆರೆಯುವ ಶಾಂತಿ !
ಈ ಚೆಲುವ ನೋಡಿದರೆ ಬೇರೆ ಕಾಂಬುದು ಬೇಕೆ ?
ಎನಿಸಿರಲು ನನಗೆ ನಾ ಹಿರಿಹಿಗ್ಗಿ ಅಂದುಕೊಂಡೆ :
“ ಜಗದೀಶನೀ ಜಾದುಗಾರಿಕೆಗೆ ಸೋಲುಂಟೆ ?
ಕಾಂಬಕಣ್ಣಿಗೆ ಬೇರೆ ಅದ್ಭುತವೆಂಬುದುಂಟೆ ? ”

# ಜೀವನವೆ !

ಜೀವನವೆ ! ನನ್ನ ಬಾಳಿನ ನಿತ್ಯವಾಹಿನಿಯೆ !
ಹೊಸನೆಲದಿ ಹೊಸತು ರುಚಿಶುಚಿಗಳನು ಪಡೆಯಲಿಕೆ
ನೀ ಹೊರಟು ಬಂದುದೆಲ್ಲಿಗೆ ಈಗ ? ನೆನೆಯುವಿಯ ?
ನಿಲ್ಲದಲೆ ಮುನ್ನಡೆದ ಬರಿಗಮನ ಮುನ್ನಡೆಯೆ ?
ಕಲ್ಲಿನಲಿ ಹುಲ್ಲಿನಲಿ ಬೆಟ್ಟದಲಿ ಘಟ್ಟದಲಿ
ತಡೆಯದಲೆ ಚಣಚಣಕೆ ಸಾರುವುದು ಹಿರಿತನವೆ ?
ಒಳದಿರುಳಿನಲಿ ಪಡೆದ ಬಲವೇನು ತಿಳಿವೇನು ?
ನಡೆನುಡಿಯು ಲೀಲೆಯಲಿ ತೋರುತಿಹ ಕಳೆಯೇನು ?
ನಿನಗೆ ಕನ್ನಡಿ ಹಿಡಿದು ಕಣ್ಣಿಕ್ಕಿ ನೋಡಿರಲು
ಪಾಡಳಿದು ಕಂಗೆಟ್ಟು ಕುಗ್ಗುವುದು ಮನ, ಮುಂದೆ
ಹರಿದು ಹೊಳೆಯುವೆನೆಂದ ತೊರೆಯೊಂದು ಮಲೆಗಳನು
ಸುತ್ತಿ ತಾ ಹೊರಟ ಮೂಲಕೆ ಮತ್ತೆ ಬಂದಂತೆ,
ಕಣ್ಣುಕಟ್ಟಿದ ಕೋಣ ಮರಮರಳಿ ಕಿರುಚುತಿಹ
ಗಾಣವನು ಆಡಿಸುತ ತಿರುಗಿದೊಲು, ದೀವಿಗೆಯ
ನೆರೆಯಲ್ಲಿ ಬವರಿವರಿಯುವ ಹುಳದ ಪಡೆಯಂತೆ,
ಹೊಸನೆಲೆಯ ಕಾಣುವುದು ಅಂತಿರಲಿ ಹಳಕೊಳೆಯ
ಹತ್ತಿರದಿ ಸುಳಿಯುತಿಹೆ, ನಿನ್ನ ನಾಶಕೆ ನೀನೆ
ನೆರವಾಗಿ ; ಆಸೆಯೆನಿತುತ್ಕಟದ ಸೀಮೆಯನು
ಮುಟ್ಟಿದರೆ ಧ್ಯೇಯವೆನಿತೆತ್ತರದಿ ಹಾರಿದರೆ
ತಾನೇನು, ಬಾಳನೀತಿಯ ಅರಿವು ಬೆಳೆದೇನು,
ನಿಚ್ಚದಿರುವಿಕೆಯ ಹಿರಿಯೆಚ್ಚರವ ನೀ ಪಡೆದು,
ಕಾಮನನು ಜ್ಞಾನನೇತ್ರದಿ ಸುಟ್ಟು ತಪದ ತನಿ-
ತೇಜದಲಿ ಮಂಗಲೆಯ ಕೈಹಿಡಿದ ಶಿವನಂತೆ
ನೀ ಮೆರೆಯದಿರೆ ನಿನ್ನ ಬಲ ನೀ ಪಡೆಯದಿರೆ.
ಸುಳಿಯದಿರು ಸುಳಿಯಲ್ಲಿ, ಹೊಸದಾರಿ ತುಳಿ ಇಲ್ಲಿ
ನಿನಗಾಗಿ ಕಾದಿಹುದು ಹೊತ ಹಿರಿ ಅಮೃತವಲ್ಲಿ.

# ನಿನ್ನ ಕಣ್ಣು

( ಮುಕ್ತಛಂದದಲ್ಲಿ )

ಮಗು,

ನಿನ್ನ ಕಣ್ಣದಾವ ಕಲ್ಪವೃಕ್ಷದ ಹಣ್ಣು ?
ಅದೆಂಥ ಚೆನ್ನು !
ನೋಡಿಯೇ ನೋಡುವೆನು ಸವಿದೇ ಸವಿದು
ನೋಟಕ್ಕೆ ದಣಿವಿಲ್ಲ, ಸವಿಗಿನಿಸು ತಣಿವಿಲ್ಲ.
ನಿನ್ನ ಕಣ್ಣಿನಲೇನು ಕಂಡೆ ಎಂಬೆಯು ?
ಮಗು, ಏನು ಕಾಣಲಿಲ್ಲ ಹೇಳು ?
ಎಲ್ಲವನು ಕಂಡೆ ನನ್ನ ನಾ ಕಂಡೆ.
ಮೀನಾಕೃತಿಯು ನಿನ್ನ ಕಣ್ಣಿನ ಪುಟ್ಟ ನೀಲಾಕಾಶದಲ್ಲಿ
ಹೊಳೆಹೊಳೆವ ಹೊಸ ಕಳೆಯು ಕಪ್ಪು ಸೂರ್ಯನು
ತುದಿಯಿಂದ ತುದಿವರೆಗೆ ತಿರುತಿರುಗಿ ತಿರುಗುವುದ ಕಂಡೆ.
ಅವನಲ್ಲಿ ಚೆಲು ಚಿಕ್ಕ ಬೆಳಕುಬಿಂದುವ ಕಂಡೆ.
ನನ್ನ ಪಡಿಮೂಡಿಸುವ ಕನ್ನಡಿ ಕಂಡೆ.
ನಾನೆ ನಿನ್ನೊಳಗೆ ಸೇರಿ ಒಂದಾಗಿರಲು
ಹಲವುಸಲ ಮುದ್ದಿತ್ತು ಮೈಮರೆತು ಮನಬೆರೆತು
ನೀ ನನ್ನದೆಂದೆ ನೀನೆ ನಾನಾದೆ.
ಮಗು, ಮುದ್ದಿನ ಮೂರ್ತಿಯೆ, ನನ್ನೊಲವಿನ ಕೀರ್ತಿಯೆ,
ಏನು ಹಸನ, ಏನು ಹೊಳಪು, ನಿನ್ನ ಕಣ್ಣು !
ನೀಲವರ್ಣದ ಕಿರಿಕಿರಿಯ ಸರೋವರದಲ್ಲಿ
ಮೇಲೆ ತೇಲುವ ಸಾಲಿಗ್ರಾಮ ಶಿಲೆಯಂತೆ ನಿನ್ನಾಲಿ
ನನ್ನ ಕರೆಯುತ್ತ ನಗುತ್ತಲಣಗಿಸುತ್ತ ತರತರದ ಲೀಲೆಯಲಿ
ಸುಳಿಯುತಿರಲು,
ನನಗೆ ಯಾವುದೂ ಬೇಡವೆನಿಸುವುದು ;

ತೊಡೆಯ ಮೇಲೆ ನಿನ್ನೊರಗಿಸಿ ಎದೆಹಾಲನುಣಿಸುತ್ತ
ನಿನ್ನ ನೋಡುವ ನೋಟವೊಂದರಲ್ಲಿಯೇ
ಮೋಕ್ಷವನು ಗಳಿಸಿ ಹಿಗ್ಗನು ಬೆಳಸಿ ಹಾಗೆ ಕೂಡಲೆನ್ನುವೆನು.
ಉಣಿಸೇಕೆ ನೀರೇಕೆ, ಕೆಲಸೇಕೆ ಬೊಗಸೇಕೆ,
ನೀನಿರಲು ನನ್ನಿದಿರು ನಿನ್ನ ಕಣ್ಣೊಂದಿರಲು ?

*  *  *

ನಿನ್ನ ಕಣ್ಣಿಗೆಲ್ಲವೂ ಅದುಭುತದ ಆಗಾರ !
ಚಿತ್ರವಿಚಿತ್ರದ ನಿತ್ಯಪ್ರದರ್ಶನದ ಸುವಿಶಾಲಮಂದಿರ !
ಹುಟ್ಟಿದ ಹಸುಗೂಸು ಕಂಡ ಬೆಳಕನೆ
ದಿವ್ಯಲೋಕದ ಕಿರಣವೆಂಬಂತೆ ನೋಡಿ ಮೆಚ್ಚಿ
ಬಾಯ ಬೆರಳಲ್ಲಿಟ್ಟು ಏನೊ ವಟವಟಿಸುತ್ತ
ಕಾಲಮೇಲೆತ್ತಿ ಆಡಿದೆ ಹಾಡಿದೆ.
ಬರಬರುತ ನನ್ನ ಮೊಗನೋಡಿ ಗುರುತಿಸುತ
ಕಿರುನಗೆಯ ಬೀರಿ ನನ್ನೆಡೆಗೆ ಸಾರಿ
ಹೊಸ ದ್ವೀಪವನು ಖಂಡವನು ಶೋಧಿಸಿದ ಸಾಸಿಗನಂತೆ
ಕುಣಿಕುಣಿದೆ, ತಣಿತಣಿದೆ.
ಬೆಳೆದಂತೆ ಹಲವು ಮುಖ ಮುಂದೆ ಸಾರಿದವು :
ಮರ ಹುಲ್ಲು ಹಸುರು, ತರತರದ ಹೂವು,
ನೆಲದ ಕರಿಕೆಂಪು ಮಣ್ಣು, ಹರಳು ಮಳಲು,
ದೀಪ, ಪಾಪಾ, ನಾಯಿ, ಬೆಕ್ಕು, ಹಾರುಹಕ್ಕಿ, ಎಮ್ಮೆಎತ್ತು
ತರತರದ ಗಾಡಿಗಳು, ವಿಧವಿಧದ ನೋಟಗಳು
ಎಲ್ಲವೂ ನಿನಗೆ ಹೊಸದು, ಎಲ್ಲವೂ ನಿನಗೆ ಸೊಗಸು.
ಇವಕೆಲ್ಲ ನೀನೇಕೆ ನಲಿವೆ ಎಂದು ನನಗಚ್ಚರಿ.
ನಾನೇಕೆ ನಲಿವುದಿಲ್ಲ ಎಂದು ನಿನಗಚ್ಚರಿ.
ಅಚ್ಚರಿಯ ಅವತಾರವೆ ! ದಿನದಿನವು ಮರಮರಳಿ
ನೋಡುವ ವಸ್ತುಜಾತ ನನ್ನ ಕಣ್ಣಿಗೆ ಹಳಸಿ

ತನ್ನ ಹೊಸತನವ, ಬಿಸವಂದ ಮಾಯೆ ಮಾಟಗಳನ್ನು
ಕಳೆದುಕೊಂಡಿದೆ ;
ಹುಲ್ಲು ಹೂವಂತಿರಲಿ, ಖಗಮೃಗವು ಅಂತಿರಲಿ,
ಅಪಾರ ನಭದ ಅಂಗಣದಲ್ಲಿ ಪ್ರತಿರಾತ್ರಿಯಲ್ಲಿ
ತೋರುವ ಚಿಕ್ಕೆಗಳ ಲೆಕ್ಕ ಮೀರಿದ ತೋರ್ಕೆಯನು
ಅದ್ಭುತದ ಅಂದವನು, ಅನಂತದ ಚೆಂದವನು
ಅರಿಯದಾಗಿದೆ ಅನುಭವಿಸದಾಗಿದೆ ನನ್ನ ನೋಟ.
ಮಗು, ನೀನೆ ಆದಿಕವಿ. ನಿನ್ನ ಕಣ್ಣೆನಗೆ ಕಾವ್ಯಗುರು.
ನನ್ನಿಂದ ಬಂದಿರುವೆ, ನಿನ್ನಲ್ಲಿ ನಾನಿರುವೆ.
ನನ್ನಲ್ಲಿ ನೀ ಮರಳಿ ಬಾ, ನಿನ್ನ ಕಣ್ಣನು ನನ್ನ
ಕಣ್ಣಲ್ಲಿ ನಿಚ್ಚನಂದಾದೀವಿಗೆಯಾಗಿ ಇರಿಸು.
ನನ್ನ ಒಲವಿನ ತಪದ ಫಲವೆ!
ನಿನ್ನ ದರ್ಶನದಿಂದ ನನ್ನ ದರ್ಶನ ಬೆಳಸು
ಸತ್ಯವನು ಕಾಂಬ, ಹಿಗ್ಗಿನ ಸುಗ್ಗಿಯಲಿ ಮುಳುಗೇಳುವ
ಕಣ್ಣನೀಡು.
ನನ್ನ ಪ್ರೀತಿಯಿಂದ ಬೆಳೆದು ನೀ ನನ್ನ ಕೀರ್ತಿಯಾದೆ.
ನಿನ್ನ ದರ್ಶನದಿಂದ ಬೆಳೆದು ನಾ ನಿನ್ನ ಕೀರ್ತಿಯಾಗೆನೆ ?



# ಜೀವನದ ಜೊತೆಗಾತಿ

ಕೊಟ್ಟುದನು ಕರುಣೆಯಾ ಬಿಟ್ಟವೆಂದು
ಬಿಟ್ಟುದನು ದೊರೆಯದಾ ಪಟ್ಟವೆಂದು
ಜೀವನದ ಜೊತೆಗಾತಿ ನಂಬಿಬಾಳು
ಕರಕರೆಯ ತಾಳದಲಿ ಎಲ್ಲ ತಾಳು.

ಎಲ್ಲ ನವದಂಪತಿಗಳಂತೆ ನಾವು
ಸಲ್ಲಲಿತ ಸ್ವರ್ಗವನು ಕಲ್ಪಿಸಿದೆವು
ನೀ ನಿನ್ನ ಬಗೆಯಲ್ಲಿ ಗೃಹಿಣಿಯಾಗಿ
ನಾನೊಬ್ಬ ಹೊಸಯುಗದ ಯುವಕನಾಗಿ. ೧

ಬಾಳ ಹೊಸತಿಲದಲ್ಲಿ ಬೆರೆಯುತಿರಲು
ಕನಸುಗುದುರೆಯನೇರಿ ಕರೆಯುತಿರಲು
ನಂನಮ್ಮ ಸ್ವರ್ಗಗಳು ಗುಡುಗಿ ಮಿಂಚಿ
ತಾಕಲಾಡಿದವೇಕೊ ಮುನ್ನಹೊಂಚಿ. ೨

ಒಲವುಬೇಟದ ಮಾಟಮಾಯೆಯಿಂದ
ಸಿಟ್ಟುಸಿಡುಕಿನ ಕ್ಷಣಿಕ ವೇಷದಿಂದ
ತಾಕಲಾಟವ ತೊಡೆದು ನಡೆಯೆ ಮುಂದು
ನಾವೊಂದೆ ನಮ್ಮ ಕರುಳೊಂದೆ ಎಂದು. ೩

ಲಜ್ಜೆಯಾ ಕರುವಿಟ್ಟ ಬೊಂಬೆಯಾಗಿ
ನನ್ನಿದಿರು ನೀನಿರಲು ಮುದುಡಿ ಬಾಗಿ
ಸ್ವಚ್ಛಂದಪ್ರೀತಿಯಾ ಪೂರದಂತೆ
ಮುಂಬರಿದು ನಾ ಕರೆದೆ ಕಾಮನಂತೆ. ೪

ಒಗೆತನದ ಮೊದಲಿನಾ ಸವಿಗಾಲದಿ
ಮೈಗೂಡಿ ಮನಗೂಡಿ ಮುದ್ದಾಟದಿ
ಮಿಂಚುಬಳ್ಳಿಯ ಹಾಗೆ ನಾವಿಬ್ಬರು
ಬೆರೆತಾದೆವರೆಚಣದಿ ಏಕಜೀವರು. ೫

ಆ ಬೆರಗುನಿಬ್ಬೆರಗು ಸುಖಸ್ಪರ್ಶವು
ಹಗಲಿರುಳಿನಾ ನಿತ್ಯನವ ಸ್ಫುರಣವು
ಆಗಿ ಸಾಗಿಸಿತೆಮ್ಮ ಸಂಸಾರವ
ಕಳೆದೆಲ್ಲ ದಂದುಗದ ಹಿರಿಭಾರವ. ೬

ಕುಶಲಮನವದರ ಬಲದಿಂದ ತಾನು
ಕನಸುಮನೆ ಕಟ್ಟಲೆಂದಿರದೆ ಏನು ?
ಇಂತಿಬ್ಬರೂ ಎಳಸಿ ಹವಣಿಸಿರಲು
ಮರಳಿ ಮುತ್ತಿದವೆತ್ತ ಕರಿಯ ಮುಗಿಲು. ೭

ನಾ ನಿನ್ನ ಕಣ್ಣಲ್ಲಿ ಹುರುಳಿಲ್ಲದಾ
ಹಂಬಲನು ಬೆಂಬತ್ತಿದಾತನಾದೆ
ನೀ ನನಗೆ ಹುರುಳೊಂದ ಧೇನಿಸುತಿಹ
ಹಿರಿದನರಿಯದ ಬಾಲೆಯಂತೆನಿಸಿದೆ. ೮

ಮೊದಲುಂಡ ರಸವೀಗ ವಿರಸವಾಗೆ
ಬೆರೆಯಲಾರದೆ ಬೆರೆತು ಬಾಳು ಸಾಗೆ
ಪಲ್ಲಟಿಸಲೊಲವುಮಂತ್ರದಲಿ ನಿನ್ನ
ಬಳಿಬಂದು ನಾನಾದೆ ಕಾಮುಕನ್ನ. ೯

ಆಕಾಶವಿಳಿದಿಂತು ಮಣ್ಣಾಗಿರೆ
ಮನವೆಲ್ಲ ಕಾಮನೆಯ ಕಣ್ಣಾಗಿರೆ
ನಿನ್ನ ಮತಿಯನು ಬಲಿಸಿ ಮುಕ್ತಗೊಳಿಸಿ
ಹೊಸಮಡದಿಯೆಂದೆನಿಸ ಆಸೆಯುಳಿಸೆ—. ೧೦

ಇಂತಾದರೂ ನಿಲ್ಲಬಹುದೆ ಬಾಳು
ನೆಳಲುಬೆಳಕಿನ ಪರಂಪರೆಯ ಸೂಳು ?
ಸಂತಾನವನು ಸಲ್ಲಿಸುತ ಬಂತು
ದುಃಖಸಂತಾನವನು ಸೂಚಿಪಂತು. ೧೧

ಮಕ್ಕಳಿಲ್ಲದೆ ಬರಿಯ ದುಕ್ಕರಾಸಿ
ನೆರೆಯಾಗಿ ಹರಿದಿತ್ತು ಸೂಸಿಸೂಸಿ
ಒಗೆದೊಂದು ಮಗುವಾಯ್ತು ನಮ್ಮಡಿಯೊಳು
ವಿಧಿಯೊಗೆದ ದುಷ್ಕರ್ಮದಾದ ಒಡಲು. ೧೨

ಮೊದಲ ಮಗುವೆಂದು ಲಲ್ಲೈಸಿ ಬೆಳಸಿ
ಹೊಸ ಕನಸುಗಳ ಕಂಡು ಹಿಂದನಳಿಸಿ
ಇರಲೆಂದು ನಾವಿರಲು ಬೆಳಗೆಯಿಲ್ಲ
ಬೆಳೆದ ಮಾಂಸದ ಮುದ್ದೆ ಆಗೆ ಎಲ್ಲ. ೧೩

ಕಾಡಲೆನ್ನುವ ವಿಧಿಯು ದಿಗ್ವಿಜಯದಂತೆ
ನೀ ಮುಂದೆ ಬಹುವಿಧದಿ ಬಳಲುತಂತೆ
ಸಾವಪಾಶದಿ ಹೇಗೊ ಹೊರಗೆ ಬಂದೆ
ನಾವು ನಡೆದೆವು ಕೂಡಿ ಮುಂದೆ ಮುಂದೆ. ೧೪

ಆರೈಕೆಯಲಿ ಆರದೊಲವಿನ ಹಿರಿದು
ದೀಪವನು ನಾನರಿತೆ ಎತ್ತಿ ಹಿಡಿದು
ತಾಳ್ಮೆಯಲಿ ತ್ಯಾಗದಲಿ ತಪವ ಗೈದು
ಬಾಳಸೂತ್ರವನರಿದು ನಡೆದೆ ನಲಿದು. ೧೫

ಇಬ್ಬರಲಿ ತೋರಿದಾ ಹೊಸ ಕಾಣಿಕೆ
ನೀಡಿತೆಮಗೊಂದು ಹೊಸಹೊಸತು ಕಾಣಿಕೆ
ಬಾವನ್ನತೆಯ್ದಂತೆ ಕಂಪುಗುವೊಲು
ಪರಿಮಳದ ಮಗು ಬಂತು ನಮ್ಮನೆಯಲು. ೧೬

ಕೋಟಿ ಕೋಟಿಲಿಯೆಲ್ಲ ಹಾರಿಹೋಗಿ
ಹತ್ತು ಕಡಲಾಚೆ ಕಣ್ಮರೆಯೆ ಆಗಿ
ಸುಖದ ಸ್ವಪ್ನವು ತಾನೆ ಮೈಯ ತಾಳಿ
ಸುಳಿಯಿತ್ತು ಮನೆತುಂಬ ನಿತ್ಯಬಾಳಿ. ೧೭

ನಲಿವಾಗಿ ಈಚಿನ್ನ ಬೆಳೆಯುತಿರಲು
ನಮ್ಮ ಹೃದಯಗಳನ್ನು ಬೆಸೆಯುತಿರಲು
ಗಾಳಿಯಲೆಯಲಿ ಅಲೆವ ನಂಜಿನಂತೆ
ಬೆಳೆಯದಾ ಮಗುವಿಹುದು ಪಂಜಿನಂತೆ. ೧೮

ಸಂಸಾರ ಸುಖದುಃಖಸಮವೆಂಬುದು
ಸಾರನಿಸ್ಸಾರಗಳ ಜೊತೆಯೆಂಬುದು
ಕಾಣುತಿದೆ ಇಂದಿನೀ ಜೀವಿತದಲಿ
ಹೂವೊಂದು ಮುಳ್ಳೊಂದು ಈ ಮರದಲಿ. ೧೯

ಒಂದು ಸೌಖ್ಯದ ಸುಗ್ಗಿ ಇನ್ನೊಂದದು
ಕಂಬನಿಯ ಹಿರಿಬುಗ್ಗೆ ಅಳಲತವರು
ಸುಖವೊಂದೆ ನಮಗುಳಿದು ದುಃಖಮೂಲ
ಅಳಿಯದಿಹುದೇಕೆಂದು ನಿನಗೆ ಶೂಲ. ೨೦

ನನ್ನಿಂದ ಬದುಕಿಂದ ದೈವದಿಂದ
ಪಡೆಯದಿದೆ ನಿನ್ನೆಲ್ಲ ಆಶೆಯಿಂದ
ನಾಬಲ್ಲೆ ನನ್ನ ಕನಸಿನ ಮಂದಿರ
ಬಿದ್ದಿಹುದು ಮುರಿದು ತನ್ನಯ ಹಂದರ. ೨೧

ಇಂತೆರಡು ತಣಿಯದಿಹ ಜ್ವಾಲಾಮುಖಿ
ತಮ್ಮ ಬೇಗುದಿಯಲ್ಲಿ ಇಹವು ಅಸುಖಿ
ಕಲ್ಲು ಕರಗಿಸಿ ಲಾವರಸವಾಗಿರಿಸಿ
ಒಂದರೊಂದರ ಮೇಲೆ ಸೂರಾಡಿಸಿ. ೨೨

ಈ ಪ್ರಳಯ ಸಮ ನಿತ್ಯವಿರಸದಲ್ಲಿ
ಸಮರಸದ ಹೊಸಸೃಷ್ಟಿ ಕಂಡರಲ್ಲಿ
ಬಾಳದೃಷ್ಟಿಯು ಪೂರ್ಣ ಪರಿಣತಿಯದು
ನೆಲೆಗೊಂಡು ಕದಲದಲೆ ಮೆರೆಯುತಿಹುದು. ೨೩

ಆ ತಿಳಿವುಜ್ಯೋತಿಯಾ ಕಿರಣವೊಂದು
ಮೂಡಿಹುದು ನನ್ನಲ್ಲಿ ಹೊಳೆದುಬಂದು
ಬಿರುಗಾಳಿಯಲ್ಲಾರಿದಂತಾಗಿಯೂ
ಆರದಿಹ ಸೊಡರಂತೆ ಆದರ ಬಗೆಯು. ೨೪

ನನ್ನನೇಹದ ಮಡದಿ ವಿರಸಸಾಕು
ಸಮರಸದಿ ಒಂದಾದ ಬದುಕು ಬೇಕು.
ಇಲ್ಲದಿಹುದಕೆ ಕೊರಗು ಇನ್ನು ಯಾಕೆ?
ಇರುತಿರಲು ನಾ ನೀನು ಎಲ್ಲದಕ್ಕೆ. ೨೫

ಒಳಿತಿಗಾಗಿಯೆ ಬಾಳು ಇಹುದು ನಂಬು
ಒಲವು ಎಂಬುದೆ ಜಗವನಾಳ್ವ ಶಂಭು
ಮಾತಾಯ ಮಾಕರುಣೆ ಕಾಯುತಿಹುದು
ಎಲ್ಲ ಜೀವರ ಸೊಲ್ಲ ಕೇಳುತಿಹುದು. ೨೬

ಯಾಕೆ ಮಿಗಿಲಹ ದುಃಖ? ತುಸುವೆ ಸುಖವು?
ಯಾಕೆ ನರಕದ ಹಾಗೆ ಲೋಕಮುಖವು?
ಹೇಳಬಲ್ಲೆನು ಹೇಳಿ ಏನು ತಣಿವೇ?
ಇದ್ದುದನು ಒಪ್ಪಿಬಿಡು ಮುಂದೆ ನಡೆವೆ. ೨೭

ನಮ್ಮ ಲೇಸಿಗೆ ಎಂದು ಭೋಗಕೆಂದು
ನೆನೆಯಬಾರದ ವ್ಯಥೆಯು ನಿತ್ಯಬಂಧು
ಆಗಿ ತಾನಿರಬಹುದು ಇಲ್ಲದಿರಲಿ
ಅದನು ಮೀರುವ ಕಲೆಯು ಕುಂದದಿರಲಿ. ೨೮

ಬಾಳು ನೀಡುವುದೆಲ್ಲ ಬೇರೆಬೇರೆ
ಕೆಲವರಿಗೆ ನೆಮ್ಮದಿಯ ಸುಧೆಯ ಧಾರೆ
ಹಲವರಿಗೆ ಬೇವಸದ ಉರಿಯಕೊಳ್ಳಿ
ತಾಳಲೆಂದದರೊಡನೆ ಸವಿಯಬಳ್ಳಿ. ೨೯

ಅವರಂತೆ ಅವರು, ನಮ್ಮಂತೆ ನಾವು
ಬಂದಂತೆ ಬಾಳುವುದು ತಾಳಿ ನೋವು
ದೊರೆವ ಸುಖ ಸವಿಮಾಡಿ ಅಸುಖವನ್ನು
ನಮ್ಮೊಳದ ನಲಿವಿಂದ ಮಾಡಿ ಚೆನ್ನು. ೩೦



# ಅರವಿಂದಮಕರಂದವೇ !

ಅರವಿಂದ ಮಕರಂದವೇ
ಹೊಸಯುಗದ ಬಿಸವಂದವೆ !

ದಶದಿಕ್ಕುಗಳ ಗಾಳಿಗಾಳಿಯಲಿ
ಜೀವಜೀವದ ಭಾವದಾಳದಲಿ
ದಿವ್ಯಜೀವನರಸದ ತೊರೆಯಾಗಿ
ಹರಿದು ಬಾ ಅರಿವಿನಾ ನೆರೆಯಾಗಿ. ೧

ಹಿಂದಿನಿಂದಿನ ಎಲ್ಲ ತಿಳಿವುಗಳ
ತಿರುಳಾದ ತನಿಜೇನೆ! ಹಿರಿಬಾಳ
ನರುಗಂಪೆ! ಚೆಲುವಿಕೆಯ ನನೆಕೊನೆಯೆ !
ಇರುವಿಕೆಯ ಅರಳಿಕೆಯ ಕೊನೆಮೊನೆಯೆ ! ೨

ಭಾರತದ ಋಷಿವರರ ಕವಿಗಣದ
ದರ್ಶನದ ಸಾರಮಧು ಬೆರೆಬೆರೆದ
ಪೂರ್ಣಯೋಗದ ಪರಮಪರಿಣತಿಯೆ !
ಸತ್ಯಯುಗಸತ್ಯವನು ಕಂಡ ಮತಿಯೆ ! ೩

ಹಿಮಪರ್ವತದ ಧವಳಶಿಖರವನು
ಕತ್ತಲೆಯ ಕರಿನೆರಳು ಕವಿದು ತಾನು
ಅಣಕಿಸುವೊಲಿಂದಿನೀ ಜಗದಿರವು
ಕೊಳೆಯಾಗಿ ಬಳಸಿಹುದು ನಿನ್ನ ಚೆಲುವ. ೪

ಹೊಳೆ ನೀನು ಹರಿಹರಿದು ಬಾಳ ತೊಳೆ
ಪೂರ್ಣಜೀವನದೆಡೆಗೆ ಚಿತ್ತವೆಳೆ
ನಮ್ಮೊಳದ ಕ್ರತುಕಿಡಿಯ ಚೇತವಿಸು
ಪೂರ್ಣತೆಯ ಪಥದೆಮ್ಮ ಮುನ್ನಡಸು. ೫

# ಅಗ್ನಿದಿವ್ಯ

( ಮುಕ್ತಛಂದದಲ್ಲಿ )

ದಿನದಿನವು ಚಣಚಣಕೆ
ಅನುಭವದ ಅಗ್ನಿದಿವ್ಯದಲಿ ಹಾಯ್ದು ಬರುತಿಹೆನು
ಹೌಹಾರಿ ಹುರಪಳಿಸಿದಂತಾಗಿಯೂ
ಉರಿನಾಲಿಗೆಯ ಉರುಬಿಗೆ ಸಿಲುಕಿ ಕರಿಕನು ತಾಳಿಯೂ
ಹೊರಬಂದು ಹಗುರಾಗಿ ನಿಲ್ಲುತಿಹೆನು.
ಹಲವಾರು ವರುಷಗಳ ಹರವಾದ ಬೀದಿಯಲಿ
ನಡೆದುದೆಲ್ಲವ ನೆನೆಯೆ ಎದೆನಡುಗುವುದು ಮತಿಯುಡುಗುವುದು.
ಯಾವ ರಕ್ಕಸಿಯೊ ಮರಮರಳಿ ಬಂದೆರಗಿ
ಸುಖಸ್ವಪ್ನಗಳ ತರಿದೊಗೆದು
ಖಿಕ್ಕೆಂದು ನಗುನಗುತ ನೆಗೆದು
ಹೋಗುತಿರೆ ಕೆನ್ನೀರ ಕಲೆಗಳ ರಂಗವಲ್ಲಿಯೆ
ನನ್ನ ಬಾಳುವೆಯ ಸಿಂಗಾರವಾಗಿಹುದು.
ಅಕೊ ಮಹಾಪಡೆಯಾಗಿ ಬಾನತುದಿಯಿಂದ ತುದಿವರೆಗೆ
ಏರೇರಿ ಬಂದವು ಮಹಾವಿಪತ್ತಿನ ಮಿಡಿಚೆ
ಯಾಕೆ ಎಂತೆಂಬ ಯೋಚನೆಗೈಯುವ ಮೊದಲೆ
ಹಸಿರಾಗಿ ನಳನಳಿಸುತಿಹ ಬಾಳಬೆಳೆಯನು ಕವಿದು
ಸುಖದ ಬೇರನು ತಿಕ್ಕಿಮುಕ್ಕಿದವು, ಸೊಕ್ಕಿದವು ಗೆಲವಿನಿಂದ,
ಕೈಗೆ ಬಂದೊದಗಿದ ಪೈರು ಬಾಡಿ ಬಿದ್ದಿತು ನೆಲಕೆ ಅಂದಿನಿಂದ.
ಋತುಮಾನಗಳ ನಿಯತ ಬರವಿನ ಹಾಗೆ
ಗ್ರಹಣಗಳ ಆಗ್ರಹದ ಆಗಮನದಂತೆ
ಕಾಲಕಾಲಕೆ ಬರುವ ಕುತ್ತವೆ!
ಕಠೋರ ಸುಂದರ ಕರ್ಮವೆ!
ನಿನಗೆ ನಾ ಬಾಗಿದೆನು, ಇಕೋ ಕೈಮುಗಿದು ಬಾಗುತಿಹೆನು.

ಬೀಸಿಹೋಗುವ ಭೀಕರದ ಬಿರುಗಾಳಿ
ನೆಲದ ಮೇಲೆಲ್ಲ ಮರಗಳ ಕೆಡವಿ ರಾಸಿರಾಸಿಯಾಗಿಸುವಂತೆ,
ಎರಗುವ ಬರಸಿಡಿಲು ಜೀವಗಳನುರಿಪುತ್ತ
ಗೋಳುಗಳ ಹಿಂದಿರಿಸಿ ಹಾಳುಗಳ ಪಸರವನು ಪಸರಿಪಂತೆ,
ಇಂದೆನ್ನ ಬಾಳುವೆಯು ಮಾಡಿಹುದು ವಿಧಿಯು ಲೀಲೆ
ಭಯ ಶೋಕ ನಿರಾಶೆ ಕುಕಲ್ಪನೆಗಳ ಕಲ್ಪಲತೆಯು
ಹತಬಲವಾಗಿ ಕೆಳಬಿದ್ದ ಆತ್ಮದ ಕರುಣಕತೆಯು.
ಬೇಡಿದುದ ಪಡೆಯದಲೆ ತಬ್ಬಲಿಯಾದ ಚಿನ್ನ ಚೆಲುವ
ಬೀದಿ ಬೀದಿಗೆ ತಿರುಗಿ ಸಿಕ್ಕುದನು ನೆಕ್ಕುವಂತೆ,
ಕಾಮನೆಯು ಬೆಂಬತ್ತಿ ಕಲ್ಪನೆಯು ಪ್ರಪಂಚದಲಿ
ಅದರ ಕೈಗೊಂಬೆಯಾಗೀ ಚಿತ್ತ ಕೈಗೆ ದೊರೆತುದನೆ ಸವಿದು
ಶಾಂತಿದಾರಿಗೆ ದೂರವಾಗಿ ನೆಲೆದಪ್ಪಿ ಅಲೆಯುತಿಹುದು.
ಬೆಟ್ಟವೇರುವ ಪಥಿಕ ಕೈಜಾರಿ ಕೊಳ್ಳದಲಿ
ಚಣಚಣಕೆ ಬೀಳಲಿರುವಂತಾಗಿ ಬಾಯ್ಬಿಟ್ಟು ಹಲುಬುತಿಹುದು.

* * *

ಪ್ರೀತಿಮಾತೆಯೆ ! ಜೀವಜೀವಗಳ ಒಲವಿನಪ್ಪುಗೆಯಲ್ಲಿ
ತಬ್ಬಿರುವ ತಾಯೆ !
ಎಲ್ಲ ಬಗೆಯನುಭವದ ತೆರೆಯ ಹಿಂದೆ
ನೀ ನಿಂತು ನೋಡುತಿಹೆ ನನ್ನೊಡನೆ ಆಡುತಿಹೆ
ಕೆಲವು ಚಣ ಕೆಂಗಣ್ಣ ಈಶ್ವರಿಯಾಗಿ ಕಂಡರೂ
ಕೋಪದಲಿ ದಂಡದಲಿ ಕರುಣೆಯವತಾರವಾಗಿ ನೀ ಕಾಯುತಿಹೆ
ಎಂಬ ನೀನಿತ್ತ ತಿಳಿವೆ ನನ್ನ ತೋಳತಾಯಿತವು, ತಾಯಿ !
ದುಃಖ ಬಂದಾಗ ಬೆದರುವೆನು ಮುದುರುವೆನು,
ಬಾಳನೌಕೆಯಿದು ಮುಳುಗಿತಿನ್ನೇನುಗತಿಯೆಂದು ಗೋಳುವೆನು,
ನಿನ್ನ ಕೃಪೆಯನು ಬೇಡಿ ಕಾಡುವೆನು.
ಕೃಪೆಯು ಕೈನೀಡಿ ಮುಳುಗುವುದ ಮೇಲೆತ್ತಿ
ನೀ ಮುಂದೆ ನಡೆಸಲು ಹಿಗ್ಗಿ ಮಲೆಯುವೆನು,

ಕರ್ಮವಶವಾಗಿ ಹೆಜ್ಜೆದಪ್ಪಿನಲಿ ಮುನ್ನುಗ್ಗಿ ಅಲೆಯುವೆನು.
ಪ್ರೀತಿಪರಮೇಶ್ವರಿಯೇ, ಜೀವಜಾತದ ಪೂರ್ಣಶಿಲ್ಪದ
ರೂವಾರಿಯೆ !

ವಿಧಿಭಯದ ಸುಳಿಯಿಂದೆನ್ನ ಹೊರಬೀಳಿಸು,
ಹಿರಿಯದರ್ಶನದ ಎತ್ತರಕೆನ್ನ ಏಳಿಸು.
ಬಂದುದೆಲ್ಲವು ಬರಲಿ, ಮುಳುಗುವುದು ಮುಳುಗಲಿ,
ನೆಲದಿಂದ ಬಾನ ನಡುವರೆಗೆತ್ತಿ ಕೆಳಗೆನ್ನನಪ್ಪಳಿಸಿ
ದುರ್ವಿಧಿಯ ಕಟ್ಟಣಕ ಹೋ ಎಂದು ಕೂಗಾಡಲಿ, ತೂಗಾಡಲಿ,
ಆತ್ಮಗಳನೆಲ್ಲ ನೀ ಹೂವಾಗಿ ಅರಳಿಸುತ ಹಣ್ಣಾಗಿ ಕಳಿಯಿಸುತ
ದುಃಖಕ್ಕೆ ಮೋಹಕ್ಕೆ ಕದಲದಿಹ ಕೊಂಕದಿಹ
ವಜ್ರಕಂಬವಾಗುವ ತೆರದಿ
ಮಾಡುವ ಮಾಟದ ಮನೆಯ ಮಗು ನಾನು.
ನಿನ್ನ ನಲ್ಬೊಡೆಯ ಮೇಲೊರಗಿ ನಲಿವುಹಾಲುಂಡು ಅನವರತ
ಬಾಳುವಂತಾಗಲಿ
ಜನ್ಮಜನ್ಮದವರೆಗೆ ಪೂರ್ಣತೆಯ ನನೆಕೊನೆಗೆ ತಾಳುವಂತಾಗಲಿ.
ತಾಯೆ ! ಅನುಭವದ ಅಗ್ನಿದಿವ್ಯದಲಿ ನೀನೆನ್ನ ಹಾಯಿಸು,
ನಿನ್ನ ನಯನದ ದಿವ್ಯ ಅಗ್ನಿಯನ್ನದರಲಿ ಕಾಣಿಸು !



# ಗುರುವೆ

ಆನಂದವಾರಿಧಿಯ ಅಂಚಿನಲಿ ನಿಂದಿಹೆನು
ಈಸಬಲ್ಲರು ಈಸಲೊಲ್ಲದೆಯೆ ಸೋತಿಹೆನು
ತ್ರಿಶರೆಯ ಮೋಹಿನಿ ಕರೆಯೆ ಜಡದ ಅಡಿಯಾಳಾಗಿ
ಪಡೆದ ಭಾಗ್ಯವನೆಲ್ಲ ನಾ ಕಳೆದುಕೊಳುತಿಹೆನು.

ಗುರುವೆ ! ನೀ ಹಗಲುದೀವಟಿಯಾಗಿ ಸುಳಿಸುಳಿದು
ಇರುಳುಕವಿದಿಹ ಅಂತರಂಗವನು ತೊಳೆದು
ಸಿದ್ಧಿಪಥದಲಿ ನಡಸಯ್ಯ ನೇರಾಗಿ
ದಿನದಿನದ ಬಾಳ ಕಣಕಣದಲ್ಲಿ ಹೊಳೆದು.



# ನೆಳಲಿನ ತಂಪೇ !

ನೆಳಲಿನ ತಂಪೇ ನಲಿವಿನ ಜೊಂಪೇ ಓ ಸವಿಸೊಂಪೇ !
ನಿನ್ನನೆ ಬಯಸಿ ಎಲ್ಲೆಡೆ ಅರಸಿ ಬೆವರನು ಸುರಿಸಿ
ಮೌನದ ಮಾಮರದಡಿಯಲಿ ಒರಗಲು ಧಾವಿಸಿ ಬಂದೆ
ಧ್ಯಾನದ ತಾನದ ತಲ್ಲೀನತೆಯಲಿ ನಿನ್ನಯ ಬಳಿಸಂದೆ

ಬಯಕೆಯು ಕೊನರಿದ ಕಾಲದಿ ನಿನ್ನಯ ಕನಸನು ಕಾಣುತ
ದಿನದಿನವೂ ನಸುನಿಲ್ಲದೆ ನೆರಳದೆ ನಡೆದೆನು ಹೂಣುತ
ಸಿರಿಯಲಿ ಉರಿಯಲಿ ಏರಿಳಿತದ ನಿಡುದಾರಿಯ ತುಳಿತದಿ
ನೀನೇ ಗುರಿ, ನಿನಗಾಗಿಯೆ ಸಾಗಿಯೆ ಸಾರಿದೆನಾತುರದಿ. ೧

ನಲುಮೆಯ ಹೊನಲಲಿ ಮಿಂದು ಚೆಲುವಿನಹೂಗಳ ಮುಡಿದು
ನೆಲಮುಗಿಲನು ಚರ-ಅಚರವನಪ್ಪುತ ಅಮರ್ದನು ಕುಡಿದು
ಮದವೇರಿದ ಬಿಡುಗಣ್ಣನೆ ಎಂಬೊಲು ಗಾಳಿಯು ಕಾಲಲಿ
ಸುಳಿಯುತ ಹರುಷದಿ ಹಾಡುತ ಸೇರಿದೆ ಬಾಳಿನ ಜಾಲದಲಿ. ೨

ಹೊಂಬಣ್ಣದ ಹೊರಹೊಂಪದು ಕರೆಕರೆಯಲು ಕಣ್ಚಿವುಟುತ
ಹೂಹಂಪಲ ಹೊಸಹಂಬಲ ಮೊಳೆಯಿಸೆ ಹೃದಯವ ಮೀಟುತ
ಸೆರೆಯಾದೆನು ಜಿನುಜಿನುಗಿನ ಬಲೆಯಲಿ ಅರಿಯದೆ ಸಿಲುಕಿ
ಸನಿಯದೆ ಇದ್ದರು ನೆನೆಯದೆ ನಿನ್ನನು ಮರವೆಯು
ಮುಸುಮುಸುಕಿ. ೩

ಕನಸಿನ ಕಾವಣ ಕೆಡೆದೊಗೆಯಲು ಬಿರುಗಾಳಿಯು ಬೀಸಿರೆ
ಗುಡುಗಿನ ಸಿಡಿಲಿನ ಪಡೆಸಾರುತ ಕಿಡಿಮಳೆಯನು ಸೂಸಿರೆ
ಅರೆಗಲ್ಲಿನ ಮಲೆಕರಗಿಪ ದಳ್ಳುರಿ ತಾಳಿದ ತಿರೆಯೊಲು
ತಿರುಗಿದೆ, ದೊರೆಯದು ತಂಪಿನ ತಾಣವು ಬಿಸುಪಿಗೆ
ಎಂಬವೊಲು. ೪

ಹೊರಬೇಗೆಯ ಬೆಂಕಿಯಲೊಳಕಿಚ್ಚಿನ ನಿಗಿನಿಗಿನೆಲೆಯಲಿ
ಅಲೆದಲೆಯುತ ಒಳಗೆಲ್ಲಿಯೊ ನೆಲಸಿದ ಆಸೆಯ ಸೆಲೆಯಲಿ
ಒಡೆದಿಹ ಕನಸಿನ ಕುಡಿಕೆಯ ಚೂರೊಳು ನೀರನು ಮೊಗೆದು
ಕುಡಿದೇಳುತ ಹುರಿದುಂಬುತ ತೆರಳಿದೆ ನಿನ್ನನೆ ಬಗೆಬಗೆದು. ೫

ಬಟಬಯಲಲಿ ಬರಿಗಾಲಲಿ ಸುಡುಮಳಲಿನಮೇಲ್ನಡೆಯುತ
ಉರಿಗುಳ್ಳಿಯ ಮೈದೊಡವಿಗೆ ನಡುಗುತ ನಡುವೆಯೆ ತಡೆಯುತ
ನಂಬಿಗೆಕೊಡೆಯನು ಬಿಡಿಸಿಯೆ ತಾಳ್ಮೆಯ ಕೈಯನು ತಾಳುತ
ಅರೆಚಣವಾದರು ನಿನ್ನಲಿ ತಂಗಲಿ ಮೈಮನವೆನ್ನುತ— ೬

ಬಂದೆನು ನೆರಳೇ ಸತ್ವದ ತಿರುಳೇ ತಾಯಿಯ ಕರುಳೇ
ಒರಗುವೆನಿಲ್ಲಿಯೆ ಮರೆಯುವೆನೆಲ್ಲವ ಬಾಳಿನ ಹುರುಳೇ
ಸುಖವಿದು ಬೇರಾವುದು ಬೇಕಿಲ್ಲವು. ನಿನ್ನಲಿ ಮುಳುಗಲಿ
ಸರಿಕೆಡಕೆಲ್ಲವು, ಬಂದುದು ಬರುವುದು, ಹರುಷವು ತುಳುಕಲಿ. ೭

ಬಲ್ಲೆನು ಉರಿಯಿದೆ ಸುತ್ತಲು ನಡುನೆತ್ತಿಯ ನೇಸರನಿರೆ
ಸುಡುಗಾಳಿಯು ಮೈತಿವಿವುದು ಬಿಸಿಯುಸಿರದರೊಳು ಕೂಡಿರೆ
ತುಂಟನ ತೆರದಲಿ ಸುಂಟರಗಾಳಿಯು ಸುತ್ತುತ ಸುಳಿದಿದೆ
ಅದರಲಿ ಸಿಲುಕಿದ ಸೃಷ್ಟಿಯ ಮೊಗವಿದು ಮರಗುತ ಬಳಲಿದೆ. ೮

ಮೌನದ ಮಗುವೇ ಪರಮನ ನಗುವೇ ನೀನೆನಗಾಸರೆ
ಉರಿಯಲ್ಲಿಯು ನೆರೆನಿಲ್ಲುತ ಬಂದಲ್ಲಿಗೆ ನೀ ಬಾರೆ
ನಿನ್ನರಸುತ ನಾ ಬಂದೆನು ನಿಂದೆನು ಇನ್ನಗಲದಿರು
ನಾನಗಲಿರೆ ನೀನರಸುತ ಬೆಂಬಳಿಯಲಿ ನೆಳಲಾಗಿರು. ೯

ಕದಡಿದ ಕಡಲಿನ ಕಲಮಲದಲ್ಲಿಯೆ ನಾ ಮುಳುಗಿದರು
ನೀನಿರು ಕೆಳಗಡೆ ಮೇಲೆಯೆ ಒಳಗಿನ ಒಳ ಆಳದೊಳು
ಆತನ ಮುಗಿಯದ ಹರಹಿನಹಿಗ್ಗಿಗೆ ನೀ ನೆಳಲಾಗಿಯೆ
ನನ್ನಲಿ ನೆಲಸಲು ಬಾಳುವೆ ಆಗಲಿ ನಿನ್ನಯ ಛಾಯೆಯೆ! ೧೦

# ಅಪೇಕ್ಷೆ — ಉಪೇಕ್ಷೆ

( ಮುಕ್ತ ಛಂದದಲ್ಲಿ )

ಅಪೇಕ್ಷೆಯ ಗಿರಿಯಲ್ಲಿ
ಚಣಚಣಕೆ ಚಿಗಿತು ನೆಗೆವ ಗಿಡಬಳ್ಳಿಗಳ
ದಾಂಗುಡಿಯ ರಿಂಗಣದ ಕುಣಿತಕ್ಕೆ ರಂಗವಾಗಿಹೆನು.
ಉಪೇಕ್ಷೆಯ ಉರಿಯಲ್ಲಿ
ಗಿರಿಗೆ ಗಿರಿಯೇ ಬೆಂದು ಹಸುರೆಲ್ಲ ಕಿಡಿಮುಸಿಯಾಗೆ
ಹಸುಳೆಬಯಕೆಗಳು ಮಡಿದೊರಗಿದ ಮಸಣವಾಗುವೆನು
ಮುಗಿಲುದ್ದ ಬೆಳೆದು ಮುಗಿದೋರದ ಮರಗಳಂತೆ
ನಾಕಂಡ ಕನಸುಗಳು ಕೆಳಗುರುಳಿವೆ
ಕಾಲರಕ್ಕಸನ ಕರಗಸದ ಒಂದೆಳತದಲ್ಲಿ.
ತಪದ ತಾಣವಿದು ಶಾಂತಿಯ ತವರಿದು
ಎಂಬ ಇಂಬಿನಲಿ ಕೈಯಿಟ್ಟ ಕಡೆಯಲ್ಲಿ
ವಿಷದ ಹಾವುಗಳು ಬುಸುಗುಡುವ ಹುತ್ತವಿದೆ.
ದೊರೆವುದೊಂದೇ–ಕೈಚಾಚಿದತ್ತ ಸೋಲಿನ ಸಿರಿ !
ಸ್ನೇಹಕ್ಕೆ ಕಾತರಿಸಿ ಬಾಳನ್ನೆ ತೆಯ್ದುದಕೆ ಸಲ್ಲಿಸುವ ಜೀವಕ್ಕೆ
ಕಡೆಗಣಿಸುವ ಕಲ್ಲೊಗೆಯುವ ಖಲತನದ ಪ್ರತಿಫಲವು,
ಸ್ನೇಹವಿರಹಿತ ಹೃದಯನಾನೆಂಬ ಮಾತುಗಾಣಿಕೆಯು !
ಈ ಗಿರಿಯನ್ನು ಈ ಉರಿಯನ್ನು
ನಿನ್ನ ಮಹಾನಾಟಕದ ಒಂದು ನೋಟವಾಗಿ ಮಾಡಿದವನೆ !
ಅನಂತ ಆಗಸದಂತೆ ನಿತ್ಯಕರುಣೆಯ ಕೊಡೆಯಾಗಿ
ನೀ ಮೇಲೆ ನಿಂತಿರಲು ಯಾಕೆ ಭಯವೆನಗೆ ?
ಗಿರಿಯಾಗಿ ನಿಲ್ಲಿಸಿ ಉರಿಯಲ್ಲಿ ಹಾಯಿಸಿ
ಮಿರುಮಿರುಗುವ ಚಿನ್ನದ ಬೆಟ್ಟವಾಗಿಸಿ
ರೂಪಿಸುವ ನೀನಿರಲು ಯಾಕೆನಗೆ ಚಿಂತೆಯ ಕಂತೆ ?
ಕೊಳೆಯೆಲ್ಲ ಕಳೆದೊಗೆದು ಬಾಳತಿಳಿವನು ಪಡೆದು
ನಿನ್ನ ರೂಪಣಕಲೆಗೆ ನನ್ನದೆಲ್ಲವನು ಮೀಸಲಿಡುವ,
ನನ್ನನ್ನು ನಿನ್ನಂತೆ ನೋಡುವ ಬಲವೊಂದೆ ನಾ ಬೇಡುತಿಹೆನು
ತಾಳ್ಮೆಯನು ನೆರೆನೆಮ್ಮಿ ಕಾಲವನು ಗಳಿಗೆಗಳಿಗೆಗೆ ದೂಡುತಿಹೆನು.

# ಪಾವನ ಕ್ರತುವೆ

ಏಳು ಏಳೆನ್ನೊಳದಿ ಕೇಳದೊರಗಿದ ಪರಮ-
ಪಾವನ ಕ್ರತುವೆ !
ಕೇಳು ಮೊಳಗುವ ಶ್ರುತಿಯ ಮಾಡು ಬಾಳನು ಕೃತಿಯ
ಹೊಸ ಬಿದಿಯ ಸತುವೆ ! ಪ.

‘ ಮಾಡಿದುದ ಮರಳಿ ನೆನೆ ಮಾಡಬೇಹುದನು ನೆನೆ
ಪೂರ್ಣತೆಯ ಪಥದಲಿ
ಮೈಗೆ ಕೊನೆ ಬೆಂಬೂದಿ ಪ್ರಾಣದೇವನು ಅಮರ
ಜನ್ಮಯಾತ್ರೆಯಲಿ.’ ೧

ಪೂರ್ಣತೆಯ ಕನಸಿಗಗೆ ನೀನೆ ಪ್ರೇರಕಶಕ್ತಿ
ನೀನೆ ಚಾಲಕನು.
ನೀನೆ ನಿದ್ರೆಯೊಳೊರಗೆ ಬಾಳು ಮಣ್ಣಾಣಿ ಹುಳವು
ಜೀವ ಪಾಮರನು. ೨

ಮೋಹಮಾಯೆಗಳೆರಗಿ ಮಾಟಮಾಡಿವೆ ನಿನಗೆ
ಚಿರನಿದ್ರೆ ತರಿಸಿ.
ನಡುನಡುವೆ ಎಚ್ಚರಲು ನಿದ್ದೆಯೇ ಸಾಜವೆನೆ
ಭ್ರಾಂತಿಯನು ಬರಿಸಿ. ೩

ಕಂಡ ಕನಸುಗಳೆಲ್ಲ ಕಮರಿ ಹೋಗುತಲಿಹವು
ಬಾಳು ಬರಿದಾಗಿ.
ನಿನ್ನ ಬೆಂಬಲವಿರದೆ ಮಾತುಮಲ್ಲನು ಜೀವ
ಸೋತು ಸುಣ್ಣಾಗಿ. ೪

ಒಮ್ಮೆ ಜಾರಿದ ಕದಡು-ಕೆಸರಲ್ಲಿ ಕಾಲಿರಿಸಿ
ಕಿತ್ತದಾಗಿಹೆನು.
ಕೀಳಹೋಗಿಯು ಮರಳಿ ಇನ್ನಾಳ ಕೆಸರಿನಲಿ
ಬೀಳುವಂತಿಹೆನು. ೫

ದುಃಖಶತ ದುರ್ಗದಲಿ ಸಿಲುಕಿರುವ ಜೀವನಕೆ
ನೀನೆ ತಾರಕನು.
ನೀನೆದ್ದ ಚಣದಿಂದೆ ಹೊಸತೊಂದು ಬಲದಿಂದೆ
ನಾನೆ ಸಾಗುವೆನು ೬

ಹಾಳು ಬೀಳುಗಳುಳ್ಳ ಮುರುಕು ಮೋಟುಗಳುಳ್ಳ
ಹಂಪೆಬಾಳುವೆಯು
ನೀನೆ ಹೊಸ ಚೇತನೆಯ ಚೆಲುನಗರವಾಗಿಸುತ
ಮೋಡಿಗೈಯುವಿಯು. ೭

ಬಾಳಿನಾದಿಯ ಚಲನ ಸತ್ಕರ್ಮಪ್ರೇರಣನೆ
ಪೂರ್ಣತೆಯ ಶಿಲ್ಪಿ!
ನಿನ್ನ ನಂಬಿಯೆ ನಾನು ಎಲ್ಲವನು ತಾಳಿಹೆನು
ಮುಕ್ತತೆಯ ಕಲ್ಪಿ! ೮

ಕಬ್ಬಿಣದ ಕೋಟೆಗಳು ಒತ್ತಿರಲು ಕೋಟೆಯೊನೆ
ನಿನ್ನ ಜರ್ಜರಿಸಿ
ತಲೆಕೊಡಹಿ ಸಿಡಿಲಂತೆ ಗಜರಿ ನೀನೇಳುತಿರೆ
ಕರಗುವವು ನುರಿಸಿ ೯

ಕುಂಡಲಿನಿ ಜಾಗರಿಸಿ ಚಕ್ರವ್ಯೂಹವ ರಚಿಸಿ
ಈ ದೇಹದಲ್ಲಿ
ಅಸುರನಾಶವ ಗೈವ ಧೀರವೀರನೆ ಏಳು
ಒಳರಂಗದಲ್ಲಿ. ೧೦

# ಒಂದರೆಕ್ಷಣ

ಒಂದರೆಕ್ಷಣ ನಿನ್ನ ಸ್ಪರ್ಶವು
ತಂದೆ! ದೊರೆವುದೆ ಪರಮಹರ್ಷವು
ಅಮೃತವರ್ಷವು!
ಮುಂದೆ ಬಾಳುವೆನದರ ನೆನವಿನ
ನಲಿವುಗೊಡವನು ತಲೆಯಲಾನುತ
ತಣಿದು ಕುಣಿಯುತ.

ನಿನ್ನ ಸೋಂಕಿನ ಸೆರಗು ತಾಗಲು
ಅರುಹನಲ್ಲವು ನಾನು ಬರುಹನು
ಅರುಹನಾಗಿಸಲೆಂದೊ ಏನೋ
ಮನವ ಮರೆಸುವ ದನಿಯು ಮೊರೆವುದು
ನಿನ್ನ ಕರೆವುದು. ೧

ಅಲ್ಪದಲಿ ಇಡಿಮುಳುಗಿ ಜೀವವು
ತನ್ನ ತಣಿವಿನ ತಲ್ಪದಿಳಿಯುತ
ಸೊಗವ ತಳೆಯದೆ ಲಘುವ ತೊರೆಯದೆ
ಇಂದು ತೊಳಲುತಿದೆ. ೨

ಬೇಡಲೊಲ್ಲೆನು ಕಾಡಲಾರೆನು
ನೀನೆ ಬಲ್ಲೆಯು ಎಂಬುದರಿವೆನು
ಅರಿತಮೀರಿದ ಬಯಕೆಯೇತಕೊ
ಒಳಗಿನಾಳದಿ ಹರಿದುಬಂದಿದೆ
ತುಂಬಿ ನಿಂದಿದೆ. ೩

ಕಲ್ಪಕಲ್ಪದಿ ನಿನ್ನ ಶರಣರು
ಪಡೆದ ಭೂಮದ ಸ್ಪರ್ಶಕಲ್ಪನೆ
ಎದೆಯ ತಟ್ಟುತ ಜುಮ್ಮುದಟ್ಟಿಸಿ
ಸುಖದ ಸಾಗರ ತೀರ ತೋರಿದೆ
ಮಾತು ಮೀರಿದೆ. ೪

ಕಲ್ಪನೆಯೆ ತಾನನಿತು ಸೊಗಸಿರೆ
ನಿಜದ ಸ್ಪರ್ಶವದೆನಿತು ಮಧುರವು
ಬಂಧದಾಟದ ಅಂದ ಚೆಂದವು
ಒಂದುತನದಲಿ ನಿನ್ನ ಆಟದಿ
ಬೆರೆವ ಮಾಟವು. ೫

ಅರೆಚಣದ ಸೋಂಕಿನಲನಂತವ
ತಬ್ಬಿ ಉಬ್ಬುವೆ ಹಿಗ್ಗಿ ನುಗ್ಗುವೆ
ವ್ಯೈಪರಿವೆಯನು ತೂರಿ ಗಾಳಿಗೆ
ಗಾಳಿ ನೆಲಜಲವೆಲ್ಲ ನಾನೇ
ಆಗಿ ಬಾನೇ. ೬

ತಮದ ತಿಂತಿಣಿ ತುಳಿದು ನಿಲ್ಲುವೆ
ಬೆಳಕುಪುತ್ತಳಿಯಾಗಿ ಹೊಳೆಯುವೆ
ಮಿಂಚು ಮುಂಚುವೆ ಸಿಡಿಲು ತಡೆಯುವೆ
ಬಾಳಗೂಢದ ಕುರುಳತುಡುಕುವೆ
ತಿರುಳ ಪಡೆಯುವೆ. ೭

ಸಾವುನೋವನು ಮಾಯವಾಗಿಸಿ
ನಿತ್ಯನೂತನ ಮುಕ್ತಿನಂದನ-
ದಲ್ಲಿ ತಣಿವಿನ ತೂಗಿನುಯ್ಯಾಲೆ-
ಯಾಡಿಸುತ್ತಲೆ ನೋಡಿ ತಣಿಯೆನು
ಹಾಡಿ ದಣಿಯೆನು. ೮

# ಪ್ರೀತಿ ಮಾತೆ !

ಪ್ರೇಮನದಿ ನೆರೆತುಂಬಿ
ಕಣ್ಣಿನಲಿ ತೆರೆಚಿಮ್ಮಿ
ಮಾತಿನಲಿ ಹೊರಹೊಮ್ಮಿ
ಪ್ರೀತಿಮಾತೇ ಓಽ ಪ್ರೀತಿಮಾತೆ !

ನಿನ್ನ ಕಾಣಿಕೆಯೊಡನೆ
ಕಣ್ದೆರೆಯಿತೀ ಬಾಳು
ನಿನಗಾಗಿ ಮೀಸಲವು
ಜನುಮಜನುಮದ ತಪವು. ೧

ಲೋಕ ಲೀಲೆಯಲೆಲ್ಲ
ನಿನ್ನ ಕರುಳಿನ ಕಥೆಯು
ಬರೆದಿಹುದು ನಿಚ್ಚಳದಿ
ನಿಶ್ಶಬ್ದ ಕವನ ತೆರದಿ. ೨

ಹೃದಯ ತುಂಬಿದ ಸಮಯ
ಹಾಡು ಹೊರಸೂಸುತಿರೆ
ನೆಲ ಮುಗಿಲ ತೆಕ್ಕೆಯಲಿ
ಬೆರೆತೆ ನಿನ್ನಾಳದಲಿ. ೩

ಜೀವಜೀವದ ನಲಿವು-
ನೋವುಗಳು ನನ್ನವೇ
ಆಗಿರಲು ಅನುಭವಿಸಿ
ನಿನ್ನ ಕಂಡೆನು ತಪಿಸಿ. ೪

ಎತ್ತರದಿ ಬಿತ್ತರದಿ
ನಿನ್ನ ಪ್ರೇರಣೆಯಲ್ಲಿ
ನಡೆದಿರಲು ನಿರ್ಮಲದ
ದರ್ಶನವ ಪಡೆದಿರಲು— ೫

ಒರೆದು ನೋಡಲು ಏನೊ
ಮುರಿದು ಮುಕ್ಕಲು ಎಂದೊ
ಕಾಮನೆಯು ಕಣ್ಸನ್ನೆ
ಸುಳಿಯೆ ಮಿಂಚಿನ ಕನ್ನೆ— ೬

ನಿನ್ನ ಕಂಡಂತಾಗಿ
ಕನ್ನೆಯಪ್ಪಿದೆ ನಾನು
ಸುಳ್ಳುಸವಿಯನು ಸವಿದು
ಮುಳ್ಳುಹಾದಿಯ ತುಳಿದು ೭

ಏನು ಹೇಳಲಿ ತಾಯಿ
ಮುಸುಳಿಸಿತು ಕಾಣಿಕೆಯು
ಮಾತಿನಲಿ ನೀನಿರಲು
ನೋಟದಲಿ ಮೋಹಿನಿಯು. ೮

ಚಿನ್ನ ಚಿಗರಿಯ ಬಯಸಿ
ಕಾಮಲೋಲಗೆ ಸಿಲುಕಿ
ಬಸವಳಿದ ಸೀತೆಯೊಲು
ಅಯ್ತು ಜೀವದ ಸೋಲು. ೯

ಹಲವು ಜನ್ಮದಿ ನೆರೆತ
ಕಲುಷ ಭಾವಗಳೆಲ್ಲ
ನಡುವೆ ತೆರೆ ನಿಲಿಸಿದವು
ಮರವೆಯನು ಬಲಿಸಿದವು. ೧೦

ಸುಖದ ಸ್ವಪ್ನವ ತರಿದು
ತಮ್ಮಯ ಪ್ಪುಗೆಯಲ್ಲಿ
ಮನದ ಮುಗುದನನು ತಾವು
ಹುಡಿಯಲ್ಲಿ ಹೊರಳಿಸಿದವು. ೧೧

ದೂರ ಕೇಳುತಲಿತ್ತು
ನಿನ್ನ ಕರುಳಿನ ಕರೆಯು
ಬೆಸುಗೆಯಾಗಿತ್ತಿಲ್ಲಿ
ಹುಸಿಸುಖದ ಜೊತೆಯಲ್ಲಿ. ೧೨

ಮರಳಿ ಬಂದೆನು ತಾಯೆ
ನೀನೆ ಗತಿಯೆಂದೊರೆದು
ಭುಲ್ಲವಿಕೆಗಳನಾಚೆ
ಸರಿಸಿ ನೀ ಕೈಚಾಚೆ. ೧೩

ತುಂಬಿ ಬಂದಿತು ಎದೆಯು
ಮುಗಿಲು ಮುಟ್ಟಿತು ಮುದವು
ನಿನ್ನ ಸಂನಿಧಿಸುಖದಿ
ಅಗಲಿಕೆಗು ಬಂತು ಸವಿ. ೧೪

ನಿನ್ನ ತೊಡೆಯಲ್ಲೊರಗಿ
ಇನ್ನು ನಿಲ್ಲುವೆ ತಾಯೆ
ನಿನ್ನ ರೂಪವ ಕಂಡು
ನಿನ್ನ ಹಾಲನು ಉಂಡು. ೧೫

ಕಾಮಮಹಿಷಾಸುರನ
ಪಾದದಡಿಯಲ್ಲಿರಿಪ
ಸದಾಸ್ಮಿತೆ ಸಕಲದಯೆ
ಸರ್ವಸಹೆ ಅಭಯಮಯೆ ! ೧೬

ದೇವದೇವತೆಗಳನು
ಬಾಲರಾಗಿಸಿ ನಿನ್ನ
ತೊಟ್ಟಿಲದಿ ಆಡಿಸಿಹ
ಅಕ್ಕರೆಯ ಅನಸೂಯೆ ! ೧೭

ಶುದ್ಧಸತ್ವದ ಬೆಳಗೆ
ಸುಖಶಾಂತಿಗಳ ತವರೆ
ನಿರ್ಭೀತೆ ನಿರಹಂತೆ
ಸರ್ವಮಂಗಲನಿರತೆ ! ೧೮

ತನ್ನತನವನು ಬಿಡದೆ
ನನ್ನತನವನು ತೊರೆದು
ನಿನ್ನ ದರ್ಶನದಲ್ಲಿ
ಬೆರೆಯುವವು ಜೀವವಿಲ್ಲಿ. ೧೯

ಸವಿನುಡಿಯು ಸೂಸುವುದು
ರಸರಾಜ್ಯ ತೆರೆಯುವುದು
ಬಾಳೆ ಹಾಡಿನ ಹೊಳೆಯು
ಆಗಿ ಹರುಷದ ಬೆಳೆಯು. ೨೦



# ಆತ್ಮತಪಸಿ

ಮನಹಿಮಾಲಯವಾಸಿ ಆತ್ಮತಪಸಿ !
ಘನಕೆ ಕೈಚಾಚಿರುವ ಮಾಸಾಹಸಿ !

ಸೋಲಿಲ್ಲ ತಡೆಯಿಲ್ಲ ಮುಂಬರಿವಿಗೆ
ಗುರಿಯತ್ತ ಮಾಗಿ ಸಾಗಿರುವ ನಿನಗೆ
ಸೋಲಿಹುದು ಗೆಲ್ಲಲಿಕೆ ಹುರಿದುಂಬಿಸೆ
ತಡೆಯಿಹುದು ಪಡೆಯಲಿಕೆ ಕಿಡಿಯೂದಿಸೆ. ೧

ಕುಳಿರ ಸೋಂಕಿನಲಿ ಕಾವಾರಲೆಂದು
ಕಡೆಗಣಿಸಿ ಹಿರಿಯಣಕವಾಡಲೆಂದು
ನಗೆಯೆ ಹಿಮವಾದಂತೆ ಸುತ್ತರಿದಿವೆ
ಸಾಲುಸಾಲಿನ ಬೆಟ್ಟ ತಲೆಯೆತ್ತಿವೆ. ೨

ಆ ಹಿಮದ ಆ ನಗೆಯ ನೀನಿದಿರಿಸಿ
ಒಳನಗೆಯ ಬೆಳಗಿಂದ ಅದ ಬೆಳಗಿಸಿ
ಸತ್ವದಲಿ ತಲೆದೋರೆ ಅಚಲ ಶಾಂತಿ
ನೀ ಪಡೆವೆ ದಿವ್ಯಜೀವನದ ಕಾಂತಿ. ೩

ಮಧುಮಾಸ ಮೊಗವಡವ ಹಾಕಿಕೊಳುತ
ಗಿಡಬಳ್ಳಿ ಹೂವುಗಳ ರೂವಾಗುತ
ತರತರದ ವೈಮಣಿಸಿ ಕೈಹೊರಳಿಸಿ
ಹಾಡಿನಲಿ ಕುಣಿತದಲಿ ಮರುಳುಗೊಳಿಸಿ— ೪

ಬಂದಿರಲು ಕಾಮುಗಳ ಕಾಮಿನಿಯರು
ತಪವ ಭಂಗಿಸಬಂದ ಅಪ್ಸರೆಯರು
ಕವಡಿ ಕರಗಿದ ಚಿತ್ತ ಬೆರೆಯೆ ಸವಿದು
ತಿಳಿವನುಣ್ಣಿಸುವೆ ನೀ ತಪದಿ ಬಲಿದು. ೫

ಕೊನೆಯು ಮೊನೆಯಲಿ ನಿಂತು ಜಾನಿಸುತಿರೆ
ಜನುಮಜನುಮದಿ ಬೀಸಿ ಬಂದಂತಿರೆ
ಅಳಿಯಾಸೆ ಕೊಳೆನೆನಹು ಇಣಕುತಿಹವು
ಬೆಳೆಯೆ ನಿನ್ನಯ ಬೆಳಕು, ಮಿಣುಕುತಿಹವು. ೬

ಗೆಲ್ಲಬಾರದ ಬಲವೆ ತುಂಬಿದೊಲವೆ !
ನಿಲ್ಲದೆಯೆ ನಡೆದಿರುವ ತಪದ ಚಲವೆ !
ಕೆಳಹೊಳೆಯ ಪತನಗಳು ಏಸಾದರು
ಪೂರ್ಣತೆಯ ಸಾಗರವ ಬಳಿತರುವವು. ೭

ಬದುಕು ಎತ್ತಿದ ಹೆಜ್ಜೆ ತಪದ ಪಥದಿ
ಮರಣ ಇರಿಸಿದ ಪದವು ದಣಿದ ಚಣದಿ
ನೋವುಕಾವುಗಳೆಲ್ಲ ಮುಳ್ಳುಮುರಿತ
ನಲಿವುತಣಿವುಗಳೆಲ್ಲ ಹಿಗ್ಗುಕುಣಿತ. ೮

ಮನಹಿಮಾಲಯದಲ್ಲಿ ನೆಲೆನಿಲ್ಲುತ
ಘನ ನಾನು ಎಂದರಿದು ನೆರೆಸೊಲ್ಲುತ
ತಪವಿಹುದೆ ಸಿದ್ಧಿಗೇ ಹಿರಿಯ ಗುರುತು
ಘನವಾಗಿ ಘನದಲ್ಲಿ ಬೆರೆವೆ ಅರಿತು. ೯



# ಓಂ ಅಶಾಂತಿಃ

## ( ಮುಕ್ತಛಂದದಲ್ಲಿ )

ಯಾವುದಿಂದಿನ ಮಂತ್ರ ?
ಜೀವಜೀವರ ಹೃದಯಗಹ್ವರದಲ್ಲಿ
ಹೊಕ್ಕಾಡಿ ಹೊರಬಂದು ಮಾತಿನಲಿ ಕೃತಿಯಲ್ಲಿ
ಮರುನುಡಿವ ಮಂತ್ರವಾವುದು ?
ಬೇರಾವುದು ? ಕಿವಿದೆರೆದು ಕೇಳು ಕೇಳು :—
ಓಂ ಅಶಾಂತಿಃ, ಓಂ ಅಶಾಂತಿಃ, ಓಂ ಅಶಾಂತಿಃ.
"ನನಗಿಲ್ಲ ಶಾಂತಿ! ಯಾರಿಗೂ ಇಲ್ಲ ಶಾಂತಿ !
ಬೇಕಾದುದೆನಗೆ ದೊರೆತಿಲ್ಲ, ಬೇಡಾದುದೆನ್ನ ತೊರೆದಿಲ್ಲ
ನನಗೆ ಸಲ್ಲುವುದೆನ್ನ ಬಳಿ ಬರಲೊಲ್ಲದು, ಬಾಳು ನಿಲ್ಲದು.
ಕ್ರೂರ ವಿಧಿಯೆನ್ನ ಬೆನ್ನಟ್ಟಿ ಹಿರಿಹೊಂಚು ಹಾಕಿ
ಅನ್ನವನು, ಧನವನ್ನು, ಮಾನವನು, ಸುಖವನ್ನು
ಪ್ರಾಣವೊಂದನು ಬಿಟ್ಟು ಎಲ್ಲವನು ಕಸಿಯುತಿದೆ
ಬದುಕಿನಾವಗೆಯಲ್ಲಿ ಕುದಿಕುದಿಸಿ ಕೊಲ್ಲದೆಯೆ ಕೊಲ್ಲುತಿದೆ.
ನಮ್ಮ ಕರ್ಮದ ಕಾಡುಕೋಣವನು ತಾನೇರಿ
ವಿಷದ ಬದುಕಿನ ಪಾಶವನು ನಮ್ಮೊಳು ಬೀಸಿ
ಬಾಳಿಸಿ ಸಾಯಿಸುವ ಹೊಸ ಕರಾಳ ಯಮನಂತೆ ! "
'ಬದುಕಿನಲಿ ಸಿರಿಯಿಲ್ಲ, ಸವಿಯಿಲ್ಲ, ನೆಮ್ಮದಿಯಿಲ್ಲ'—
ಈ ಇಲ್ಲಗಳ ಇಲ್ಲಣವಿಡಿದ ಮನೆಮನೆಗೆ
ಹತ್ತಿದುರಿಯಾಗಿ ಅಶಾಂತಿ ತನ್ನ ಕೆನ್ನಾಲಿಗೆ-
ತಂಡವನು ದಿಕ್ಕು ದಿಕ್ಕಿನಲಿ ಹೊರಚಾಚಿ ಬಾನ ಬಾಚಿ
ನೆರೆಮನೆಗಳ ಸೀದು ತೇಗಿ ತಣಿದು
ಅಶಾಂತಿಪಂಥವ ಬಲಿಸಿ ಶಾಂತಿಯೆಂಬುದ ಕಾಂಬುದೇನೊ !

* * *

ಇಲ್ಲದವರಿಗಿಲ್ಲೆಂಬ ಅಶಾಂತಿ.
ಇದ್ದವರಿಗಿನ್ನು ಮಿಗಿಲಾದುದಿಲ್ಲೆಂಬ ಅಶಾಂತಿ.
ಬೇಡಿ ಬಳಲುವ ಎತ್ತರದ ಹದ್ದುಕಣ್ಣಿಗೆ
ಇದ್ದುದದು ತೀರ ತುಸು, ಇಲ್ಲವೆಂದರು ಲೇಸು
ಯಾರ ಗೋಣನು ಮುರಿದರೇನು, ಯಾರ ಎದೆಯನು ತುಳಿದರೇನು
ಸುಳ್ಳುಮೋಸಗಳನೇಸುಸಲ ಹಾಸಿ ಹೊದ್ದರು ಏನು
ಎಣಿಕೆಯಿಲ್ಲದ ಹಣ, ಗಣಿಕೆಯೊಂದಿಗೆ ಸುಖದ ಕ್ಷಣ
ಎಲ್ಲ ಸುಖಸಾಧನ ಬೇಕು, ಇನ್ನೂ ಬೇಕು,
ಎಲ್ಲೆಡೆಗಳಲ್ಲಿ ಮಾನ, ಎಲ್ಲರ ಬಾಯಲ್ಲಿ ಸ್ತುತಿಗಾನ—
ಕಾಮನೆಗೆ ಕೊನೆಯಿಲ್ಲ, ಕೊಟ್ಟಂತೆ ಕೊನರುವುದು.
ಇದ್ದರೂ ಅಶಾಂತಿ, ಇಲ್ಲದಿರೆಯೂ ಅಶಾಂತಿ.

* * *

ಈ ಕದಡಿದ ಕೆರಳಿದ ಕಾಲಸಾಗರದಲ್ಲಿ
ಅಶಾಂತಿಯ ದ್ವೀಪಗಳು ಹೊಯ್ದಾಡಿ ಸಿಡಿದೆದ್ದು
ಒಂದನೊಂದನು ತಾಕಲಾಡುತಿರುವಲ್ಲಿ,
ಬಂಡೆಯಲಿ ಕಾಲೂರಿ ಬಾನಿನಲಿ ಕೈಯೆತ್ತಿ
ಶಾಂತಿಯನು ಬಯಸಿ ಅಶಾಂತಿಯಲಿ ಮುಳುಗಿ
ಚಲಮಲಿಸುತಿಹ ಮಿಣುಮಿಣುಕನೆತ್ತರದಿ ಬೆಳಗಿ
ನಿಂದಿಹುದೊಂದು ಜೀವದ ದೀಪಸ್ತಂಭ.
ಒಂಟಿಯಾಗಿ ನಿಂದಿಹುದೆ ಅದರ ದಂಭ.
ಕೆಳೆಯ ಬೇಡುವ ಅದರ ಕೈಹಿಡಿದು ಕುಲುಕಿ ಸವಿ ನುಡಿದು
ಕೆಳಗೆಳೆವ ಕುಹಕಿಗಳೆ ಸುತ್ತುನೆರೆದಿಹರು.
ಮೊಸಳೆಗಳ ಮಧ್ಯದಲಿ ಸಿಲುಕಿದ ಹಸುಳೆಯಂತೆ
ಹೊರಬರದೆ ಒಳಗಿರದೆ ವಿಲಿವಿಲಿಸುತಿಹುದು.
ಹೃದಯದ ಮೊರೆಯ ಕೇಳುವರಿಲ್ಲ,
ತಿಳಿವಿನ ತಿರುಳ ಹೇಳುವರಿಲ್ಲ.
ಸ್ವಾರ್ಥಯಜ್ಞಕೆ ಬಲಿಗೈದ ಕುರಿಯ ಸಿಂಗರಿಸಿ

ಹಸುರು ಮೋಯಿಸುವಂತೆ ಸವಿಮಾಡಿ ಕೊಂಡಾಡಿ
ಜೀವಕೊಳ್ಳುವರಿಹರು ಬೇಡಿದಷ್ಟು ಜನ.
ವಕ್ರಪಂಥದ ವಾಮವಿದ್ಯಾನಿಪುಣ ಎರಡುನಾಲಿಗೆಜಾಣ
ನಾಗರಿಕ ನಾಗರಹಾವುಗಳು ಸುತ್ತು ಸುಳಿಯುತಿಹವು.
ಬಾಯ್ತುಂಬ ಉಚ್ಚತಮ ಉಕ್ತಿಗಳ ಉಚ್ಚಾರ
ಮನವೆಲ್ಲ ಅಘಮಂತಮ ಭಾವಗಳ ಸಂಚಾರ.
ಆಡುವದೊಂದು, ಮಾಡುವದೊಂದು,
ಆದರೂ ಮಾಡಿದುದಕೆಲ್ಲ ತತ್ವದ ಬೆಂಬಲ,
ನೀತಿಯ ನೆಲಗಟ್ಟು ಇಹುದೆಂಬ ಭ್ರಾಂತಿಯೋಗ!
ಹೃದಯದ ಕೊಳೆಯನ್ನು, ಕೃತಿಯ ಕೀಳ್ಮೆಯನ್ನು
ಮಣ್ಣಿನಲಿ ಮುಚ್ಚಿ ನಿರ್ಮಲಿನವೆಂದು ತೋರುವ
ಮತಿಯೊಂದ ನೀಡಿಹುದು ಇವರ ದೈವ,
ಆತ್ಮನಾಶಕೆನವಮಾಡಿದ ಸೀಳುದಾರಿಯಾಗಿ.
ತನ್ನ ಕರ್ಮದ ಕಾಳಿಮಡುವಿನಲಿ ಸಿಲುಕಿ
ತನ್ನ ಕಾಮದ ಕನಕಮೃಗಕಾಗಿ ನಿಲುಕಿ
ಬಲವ ಪಡೆಯದೆ ಶಾಂತಿ ದೊರೆಯದೆ
ಹುರುಪಳಿಸಿದ ಜೀವವಿದು ಬಂದು ನೆಲಸಿಹುದು
ಇಂಥ ಮಿತಶತ್ರುಗಳ ಗಂಟಲಗಾಣರ ನಟ್ಟನಡುವೆ.

⁂ ⁂ ⁂

ದಿನದಿನಕೆ ಶಾಂತಿಯದು ಹಿಂಜಾರುವುದು
ಅಶಾಂತಿ ಉರಿದೆದ್ದು ತೋರುತಿಹುದು.
ಎಲ್ಲರನು ಪ್ರೀತಿಸು, ಯಾರಲ್ಲಿಯೂ ಹಗೆ ಸಲ್ಲ
ಎಂಬ ಜೀವಕೆ ವಿಧಿಯ ಕಟ್ಟಣಕದ ಕಾಣಿಕೆಯಿದು!
ಪರಿಸರದಿ ಎಳ್ಳನಿತು ಬದಲಿಲ್ಲ.
ಬದಲಿರದೆ ಎಳ್ಳನಿತು ಮುದವಿಲ್ಲ, ತಣಿವಿಲ್ಲ.
ಎಲ್ಲ ಕಾಮಗಳ ತೊರೆದು ನಿಸ್ಪೃಹನಾಗಿ
ನಾನೆಂಬುದನು ನನ್ನದೆಂಬುದನು ನೀಗಿ

ನಿಂತವನೆ ಶಾಂತಿಹೊಂದುವನು ಎಂದಿತು ಗೀತೆ,
ಸುಖವೆಲ್ಲ ಆತ್ಮದಲಿ ಎಂದು ಸಾರಿದ ಮಾತೆ,
ಅದು ಹೇಗೆ ತೊರೆಯುವುದು ಎಲ್ಲ ಕಾಮುಗಳನು ?
ನಾನೆಂಬುದಿಲ್ಲದ ಬಾಳಿದೇನು ?
ಸುಖದ ಸಾಗರವನ್ನೆ ನುಂಗಿ ನೀರ್ಕುಡಿಯಲೆನೆ
ಒಳಗಿಚ್ಚು ನಿಗಿನಿಗಿಸುತಿರೆ ಎಲ್ಲಿದೆ ಆತ್ಮ?
ಸಂತಪ್ತಹೃದಯದ ಭೀಕರಾಕೃತಿ ಕಂಡು
ವಿವೇಕಶಿಶು ಬೆಬ್ಬಳಿಸಿ ನೆಲತಬ್ಬಿಕೊಂಡಿತು.
ಕಾಮಲೋಹವ ಪ್ರೇಮಪಾರಜದಿಂದ ಹೊನ್ನಾಗಿಸಿ
ಬೇಡಿ ಕೊರಗದೆ ಕೊಡುತ ಹಿಗ್ಗುವ ಕಲೆಯಾಗಿಸಿ
ಶಾಂತಿಸುಖವನು ಪಡೆದ ಅನುಭವದ ಲಹರಿಗಳು
ಇಂದಿನೀ ಅಲ್ಲೋಲಕಲ್ಲೋಲದಲಿ ಅಡಗಿದವು.
ಬೆಳೆಯುತಿರೆ ಅಶಾಂತಿ ಜೀವ ಕೂಗಿತು ಆಗ :
" ನಮೋನಮ ಓ ಅಶಾಂತಿ, ನೀನಿಂದು ನನ್ನ ಆರಾಧ್ಯದೈವ!
ನನ್ನ ಮೈಯನು ಮುತ್ತು ಮನವನು ತುತ್ತು
ಒಳಗೊಳಗೆ ಹೊತ್ತು ದಣದಣಿಸಿ ದಳ್ಳುರಿಯಾಗಿ !
ಹಿಂಜರಿಯದಿರು, ಕನಿಕರಿಸದಿರು,
ಪ್ರತಾಪಪರಮಾವಧಿಯ ತರುಬದಿರು.
ಜಿಂಯ್ಗುಡುವ ಜೀವನದ ವನದೆಲ್ಲ
ಕಾಡುತನವನ್ನು ಬಯಲಿಗೆಳೆ,
ನನ್ನ ಬಾಳಿನ ಬುರುಕೆಯನು ಹಾರಿಸುತ
ನಗ್ನಸತ್ಯಕ್ಕೆ ಕನ್ನಡಿ ಹಿಡಿದು ತೋರಿಸು,
ಅಗ್ನಿದೇವತೆಯಾಗಿ ಪ್ರಜ್ವಲಿಸಿ ಸುತ್ತರಿದು ನಿಲ್ಲು.
ಶಾಂತಿಯೆಂಬುದಿರೆ, ನಿನ್ನ ಗರ್ಭದಿ ಜನಿಸಿ
ಬಂದೀತು, ನಿಂದೀತು ನವಯುಗದ ಅವತಾರವಾಗಿ.
ಓಂ ಅಶಾಂತಿಃ ಓಂ ಅಶಾಂತಿಃ ಓಂ ಅಶಾಂತಿಃ "

# ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೩ | ೧೦ | ತೆರಿದ | ತೆರದ |
| ೧೭ | ೧೮ | ನಡೆದೆ | ನಡೆದೆ ನೀ |
| ೨೩ | ೧೬ | ಕತೆಕುದಿಸಿ | ಕತೆ ಕುದಿಸೆ |
| ೪೦ | ೭ | ಸಾಗಿ | ಸಾರಿ |
| ೬೯ | ೩ | ತೆರೆಯು | ತಿರೆಯು |
| ೮೬ | ೨ | ಸಾರಿದ ಮಾತೆ | ಸಾರಿದ ಮಾತೆ. |